# ಮಾನಸ ಶಾಸ್ತ್ರದ ಮಾತು.

ಎಂ. ಜಿ. ವೆಂಕಟೇಶಯ್ಯ, ಎಂ.ಎ., ಬಿ.ಟಿ.,

ವಿನಾಯಕ ಪ್ರಕಟನಾಲಯ.

ಸತ್ಯಶೋಧನ ಪುಸ್ತಕ ಭಂಡಾರ
ಬೆಂಗಳೂರು ನಗರ.

# ಮುನ್ನುಡಿ

ಕನ್ನಡಭಾಷೆಯಲ್ಲಿ ಶಾಸ್ತ್ರಗ್ರಂಥಗಳೇ ಕಡಮೆ. ಹೀಗಿರುವಲ್ಲಿ ಪಾಶ್ಚಾತ್ಯ ಭೌತಿಕ ವಿಜ್ಞಾನ ಶಾಸ್ತ್ರ ಸಂಪ್ರದಾಯವನ್ನು ಅನುಸರಿಸಿ ಬರೆದ ಗ್ರಂಥಗಳು ಇಲ್ಲವೇ ಇಲ್ಲವೆಂದು ಹೇಳಬೇಕಾದುದೇನು! ಆಧುನಿಕ ವಿದ್ಯಾಭ್ಯಾಸವಮಾಡಿ ವಿಜ್ಞಾನ ಶಾಸ್ತ್ರಾಧ್ಯಯನದಲ್ಲಿ ಪಾಂಡಿತ್ಯವನ್ನು ಗಳಿಸಿದ ಕನ್ನಡಿಗ ಮಹಾಶಯರು, ಮಾತೃಭಾಷಾಭಿಮಾನದಿಂದ ಕನ್ನಡಭಾಷೆಯಲ್ಲಿ ವಿಜ್ಞಾನ ವಿಷಯಕವಾಗಿ ಗ್ರಂಥರಚನೆ ಮಾಡಲು ಪ್ರಾರಂಭಿಸುವರಾದರೆ, ವಾ[redacted]ೇಶಕ್ಕೂ-ಭಾಷೆಗೂ ಮಹದುಪಕಾರ ಮಾಡಿದಂತಾಗುವುದು. ಮಾತ್ರವಲ್ಲ-"ಹೈಸ್ಕೂಲು ತರಗತಿಗಳಲ್ಲಿ ವಿಜ್ಞಾನ ಶಾಸ್ತ್ರ ವಿಚಾರಗಳನ್ನು ದೇಶಭಾಷೆಯಲ್ಲಿ ಬೋಧಿಸಲು ತಕ್ಕ ಪಠ್ಯಪುಸ್ತಕಗಳಿಲ್ಲ" ಎಂಬ ಕೊರತೆಯು ಕಾರಣವೂ ನೀಗಿ, ನಮ್ಮ ಬಾಲಕರು, ತೊಡಕಿಲ್ಲದೆ - ತೊಂದರೆಯಿಲ್ಲದೆ ಮಾತೃಭಾಷೆಯಲ್ಲೇ ವೈಜ್ಞಾನಿಕ ವಿಚಾರಗಳಲ್ಲೂ ಬೋಧೆ ಹೊಂದಲು ಅನುಕೂಲವಾದಂತಾಗುವುದು.

ಪಾಠಶಾಲೆಗಳಲ್ಲಿ ಕ್ರಮ ವಿದ್ಯಾಭ್ಯಾಸದ ನಿಯಮ ನಿಬಂಧನೆಗಳಿಗೆ ಒಳಪಟ್ಟು ಓದು ಕಲಿವ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಪಠ್ಯಪುಸ್ತಕಗಳನ್ನು ರಚಿಸುವುದು ಈಗ ಹೇಗೆ ಆವಶ್ಯಕವೋ, ಜನಸಾಮಾನ್ಯದ ಬೋಧನೆಗಾಗಿಯೂ, ಈ ಬಗೆಯ ಶಾಸ್ತ್ರ ವಿಚಾರಗಳನ್ನು ಕುರಿತು ವಿವರಿಸುವ ಗ್ರಂಥರಚನೆ ಮಾಡಬೇಕಾದುದೂ ಹಾಗೆಯೇ ಆವಶ್ಯಕವಾಗಿದೆ. ಆದರೆ ವಿದ್ಯಾರ್ಥಿಗಳ - ಕ್ರಮಪಾಠಕ್ಕೆ ಉಪಯೋಗವಾಗುವ ಗ್ರಂಥಗಳಿಗೂ, ಜನಸಾಮಾನ್ಯದ ಪರಿಚಯಕ್ಕಾಗಿ ಬರೆಯಲ್ಪಡಬೇಕಾದ ಗ್ರಂಥಗಳ ರಚನೆಗೂ ವ್ಯತ್ಯಾಸವಿರಬೇಕು. ಮೊದಲನೆಯ ಮಾದರಿಯಲ್ಲಿ ಶಾಸ್ತ್ರದ ವಿವಿಧ ಭಾಗಗಳ ವಿಷಯ ವಿವರಣೆಗೆ ಹೆಚ್ಚು ಗಮನ ಕೊಡಲ್ಪಡಬೇಕಾಗುವುದು. ಆದರೆ ಎರಡನೆಯ ಮಾದರಿಯ ಪುಸ್ತಕಗಳಲ್ಲಿ ಆದ್ಯಂತವಾಗಿ ಶಾಸ್ತ್ರೋಕ್ತ ವಿಷಯ ವಿವರಣೆಗಳು ಬರಬೇಕಾದ ಆವಶ್ಯಕವಿಲ್ಲ - ಹೇಳಿದ ಒಂದು ವಿಚಾರವು, ಸುಬೋಧವಾಗಿ ಪಾಠಕನ ಮನಸ್ಸಿಗೆ ಪರ

ಸಹಾಯವಿಲ್ಲದೆಯೇ ತಿಳಿವಂತಿದ್ದರೆ ಸಾಕು. ಅವನ ನಿತ್ಯದ ಅನುಭವಕ್ಕೆ ಬರುವ ವಸ್ತು - ವಿವರಣೆಗಳ ಮೂಲಕ ಶಾಸ್ತ್ರ ವಿಚಾರದ ಸ್ಥೂಲ ತತ್ವಗಳನ್ನು ಅವನ ಗಮನಕ್ಕೆ ತರತಕ್ಕುದೇ ಈ ಬಗೆಯ ಗ್ರಂಥರಚನೆಗೆ ಮುಖ್ಯ ಉದ್ದೇಶವಾಗಿರಬೇಕು.

ಈ ಜನಾಂಗ ಬೋಧನೆಯ ಮಹದುದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡೇ ಶ್ರೀಮಾನ್ ಎಂ. ಜಿ ವೆಂಕಟೇಶಯ್ಯನವರು, ಈ ಪುಸ್ತಕದಲ್ಲಿ ಕೊಟ್ಟಿರುವ ಕೆಲವು ಲೇಖನಗಳನ್ನು ಬರೆಯತೊಡಗಿದರೆಂದು ಭಾವಿಸುತ್ತೇನೆ. ಪಶು ಮತ್ತು ಮನುಷ್ಯನ ವರ್ಗಕ್ಕೆ ಇರುವ ಪ್ರಬಲ ವ್ಯತ್ಯಾಸವು ನೈಸರ್ಗಿಕ ಬೋಧೆ (*Instinct*) ಮತ್ತು ಬುದ್ಧಿ ಕುಶಲತೆ (*Intelligence*) ಎಂದು ಪ್ರಾರಂಭಿಸಿಕೊಂಡು, ಕ್ರಮವಾಗಿ, ಸ್ವಸಂರಕ್ಷಣೆ ಮತ್ತು ಸ್ವವಂಶಾಭಿವೃದ್ಧಿ ಇವುಗಳು ಎಲ್ಲಾ ಪ್ರಾಣಿವರ್ಗಕ್ಕೂ ಹೇಗೆ ಸರ್ವಸಾಮಾನ್ಯವಾದ ನೈಸರ್ಗಿಕ ಬೋಧೆಯಾಗಿದೆ ಎಂಬುದನ್ನು ವಿವರಿಸಿದ್ದಾರೆ, ತರುವಾಯ ನಗು, ಭಯ, ಪರಶೋಧಕತ್ವ ವಿಷಯಾಸಕ್ತಿ. ಬುದ್ಧಿಕುಶಲತೆಯ ವಿಚಾರ ಇವುಗಳನ್ನು ಮಾನಸ ಶಾಸ್ತ್ರದ ಪ್ರಗತಿಪರ ಕ್ರಮವನ್ನನುಸರಿಸಿ ಹೇಳಿಕೊಂಡು ಹೋಗಿದ್ದಾರೆ. ಶಾಸ್ತ್ರ ವಿಚಾರಗಳನ್ನು ಜನಸಾಮಾನ್ಯರಿಗೆ ತಿಳಿಸುವಲ್ಲಿ ಕಬ್ಬಿಣದ ಗುಂಡನ್ನು ನುಂಗಿಸುವಂತಿರಬಾರದು - ಲೇಖಕನ ವಿಷಯ ಪ್ರತಿಪಾದನ ಕೌಶಲವು ಸುಲಿದ ಬಾಳೆಯ ಹಣ್ಣನ್ನು ಕೊಡುವಂತಿದ್ದರೆ, ಅದರಿಂದ ವಾಸ್ತವವಾಗಿ ಆ ವಿಚಾರವು ಪಾಠಕನ ಮನಸ್ಸಿನ ಮೇಲೆ ತಪ್ಪದೆ ಪ್ರತಿಬಿಂಬಿಸುವುದು. ಶ್ರೀಮಾನ್ ವೆಂಕಟೇಶಯ್ಯನವರು, ತಮ್ಮ ಎಲ್ಲಾ ಲೇಖನಗಳಲ್ಲೂ ತಾವು ಯಾರಿಗಾಗಿ ಈ ಲೇಖನಗಳನ್ನು ಬರೆಯತೊಡಗಿರುವೆವೆಂಬುದನ್ನೂ, ಅವನ ಮಾನಸಿಕ ಶಕ್ತಿ - ಪ್ರೌಢಿಮೆಗಳು ಯಾವ ಪ್ರಮಾಣದಲ್ಲಿವೆ ಎಂಬುದನ್ನೂ ಗಮನದಲ್ಲಿಟ್ಟುಕೊಂಡೇ ಮುಂದರಿಸಿದ್ದಾರೆ.

ಹೈಸ್ಕೂಲು ಕಾಲೇಜು ತರಗತಿಗಳಲ್ಲಿ ಅಭ್ಯಾಸಮಾಡುವ ನಮ್ಮ ಅನೇಕ ಬಾಲಕರು, ವಿಜ್ಞಾನ ಶಾಸ್ತ್ರವನ್ನು ಅಧ್ಯಯನ ಮಾಡುತ್ತಾ

ರಾದರೂ, ಅವರ ಆ ಅಭ್ಯಾಸವೆಲ್ಲವೂ, ಕೇವಲ ಒಂದೊಂದು ಪರೀಕ್ಷೆಯಲ್ಲಿ ಉತ್ತೀರ್ಣರಾಗುವದಕ್ಕೆ ಮಾತ್ರ ಸಹಕಾರಿಯಾಗುತ್ತವಲ್ಲದೆ, ಆದರಿಂದ ಅವರ ನಿತ್ಯಜೀವನಕ್ಕೆ ಯಾವ ಪ್ರಯೋಜನವೂ ಉಂಟಾಗುತ್ತಲಿಲ್ಲ - ಇದಕ್ಕೆ - ಮುಖ್ಯವಾಗಿ, ಆಯಾ ಶಾಸ್ತ್ರೀಯ ವಿಚಾರಗಳನ್ನು ತಮ್ಮ ನಿತ್ಯಜೀವಿತದೊಂದಿಗೆ ಸಂಬಂಧಪಡಿಸಿಕೊಳ್ಳುವದು ಹೇಗೆಂಬ ವಿಚಾರದಲ್ಲಿ ಅವರಿಗೆ ತಿಳುವಳಿಕೆಯಿಲ್ಲದೆ ಇರುವದೇ ಕಾರಣವಾಗಿದೆ. ಈ ಕೊರತೆಯನ್ನು ನೀಗಿಸುವ ಉದ್ದೇಶದಿಂದ ನಡೆವ ಈ ಬಗೆಯ ಪ್ರತಿಯೊಂದು ಪ್ರಯತ್ನವೂ ಕರ್ಣಾಟಕ ದೇಶಕ್ಕೆ ಸಾರ್ಥಕವಾದ ಸೇವೆಯಾಗಿ ಪರಿಣಮಿಸುವದೆಂದು ಧಾರಾಳವಾಗಿ ಹೇಳಬಹುದು.

ಶ್ರೀಮಾನ್ ವೆಂಕಟೇಶಯ್ಯನವರಿಗೆ, ಭೌತಿಕ ವಿಜ್ಞಾನ ಶಾಸ್ತ್ರ ವಿಚಾರಗಳನ್ನು ಮೇಲೆ ಹೇಳಿದಂತೆ ಜನಸಮಾಜದ ಬೋಧನೆಗೆ ಯೋಗ್ಯವಾಗುವಂತೆ ಬರೆವ ಸ್ವಾಭಾವಿಕ ಪ್ರತಿಭೆಯಿದೆಯೆಂಬುದು, ಈ ಕೆಲವು ಲೇಖನಗಳಿಂದ ಸ್ಪಷ್ಟವಾಗುತ್ತದೆ. ಹಸಿದ ಮಗುವಿಗೆ ಪ್ರತಿಫಲಾಪೇಕ್ಷೆಯಿಲ್ಲದೆ ಹಾಲು ಕೊಡುವದು ಹೇಗೆ ತಾಯಿಯ ಕರ್ತವ್ಯವೋ ಹಾಗೆಯೇ, ಆರ್ತರಾದ ಅಜ್ಞರಿಗೆ ಜ್ಞಾನದಾನ ಮಾಡುವದೂ ವಿದ್ಯಾವಂತರ ಮತ್ತು ಪ್ರಾಜ್ಞರ ಮೇಲೆ ಹೊತ್ತ ಜವಾಬುದಾರಿ ಎಂಬುದನ್ನು ಶ್ರೀಯುತರು ಗಮನಕ್ಕೆ ತಂದು ತಮ್ಮ ಈ ಬಗೆಯ ಸಾಹಿತ್ಯ ಸೇವೆಯನ್ನು ಮುಂದರಿಸುವರಾದರೆ, ನಿಜವಾಗಿ ಲೋಕೋಪಕಾರವಾಗುವದೆಂದು ಎಣಿಸುತ್ತೇನೆ.

ಪ್ರಾರಂಭದಲ್ಲೇ ಹೇಳಿದಂತೆ, ಕನ್ನಡದಲ್ಲಿ ಅತಿ ವಿರಳವಾಗಿರುವ ಈ ಬಗೆಯ ಗ್ರಂಥ ಲೇಖನ - ಪ್ರಚಾರಣೆಗಳು, ಈ ಗ್ರಂಥಕ್ಕೆ ಕನ್ನಡಿಗರು ತೋರಿಸುವ ಪ್ರೋತ್ಸಾಹದಿಂದ ಅಭಿವೃದ್ಧಿಗೊಳ್ಳುವವೆಂದು ನಂಬಿದ್ದೇನೆ.

ಇತಿ,

ಬೆಂಗಳೂರು ನಗರ,
ತಾ|| ೧-೩-೧೯೩೦.

ಯಂ. ರಾಮರಾವ್,
ಸಂಪಾದಕ. 'ಸುಬೋಧ'

# ಮಾನಸ ಶಾಸ್ತ್ರದ ಮಾತು

೧

ವಿದ್ಯೆಯೆಂದರೇನು ? ಇದನ್ನು ಅನೇಕ ಶತಮಾನಗಳಿಂದಲೂ ಮಹನೀಯರನೇಕರು ವಿವರಿಸಿರುತ್ತಾರೆ. ಆಯಾ ಜನಾಂಗಗಳಿಗೆ ತಕ್ಕಂತೆಯೂ, ಆಯಾ ಕಾಲದೇಶಗಳಿಗೆ ತಕ್ಕಂತೆಯೂ, ಆಯಾ ವ್ಯಕ್ತಿಗಳಿಗೆ ತೋಚಿದಂತೆಯೂ ಚರ್ಚಿಸಿದ್ದಾರಾಗಿ, ಸರ್ವ ಸಮ್ಮತವಾಗಿ 'ವಿದ್ಯೆ' ಎಂದರೇನೆಂಬುದನ್ನು ಯಾರೂ ಹೇಳಿಲ್ಲ; ಹಾಗೆ ಹೇಳಲು ಸಾಧ್ಯವೂ ಅಲ್ಲ. ವೇದಾಂತಿಗೆ ವಿದ್ಯೆಯೆಂದರೆ, ಪರಮಾತ್ಮನೊಡನೆ ಸೇರುವಿಕೆ. ಇಹಲೋಕದ ವಿಚಾರಗಳಲ್ಲೇ ಲೀನವಾಗಿರುವವನಿಗೆ ಯಾವುದರಿಂದ ತಾನು ಇಹಲೋಕದಲ್ಲಿ ಸಕಲ ಸುಖಗಳನ್ನೂ ಅನುಭವಿಸಲು ಸಾಧ್ಯವೋ ಅದನ್ನು ಕಲಿಯುವುದೇ ವಿದ್ಯೆ. ಈ ರೀತಿಯಾಗಿ ಆಯಾ 'ವಿದ್ಯೆ'ಗಳಿಂದ ಏನು ಮಾಡಲು ಸಾಧ್ಯವೋ ಅವುಗಳನ್ನು ನಮೂದಿಸಿದ್ದಾರಾಗಿ ವಿದ್ಯೆಯೆಂದರೆ ಏನೆಂಬುದನ್ನು ಹೇಳಿಲ್ಲ. ತಾಮ್ರವೇನೆಂದರೆ, ತಾಮ್ರದಿಂದ ಚಂಬು, ತಟ್ಟೆ, ಪಂಚಪಾತ್ರೆ ಮುಂತಾದುವನ್ನು ಮಾಡುತ್ತಾರೆಂದ ಹಾಗಾಯಿತೇ ಹೊರತು, ತಾಮ್ರವೇನೆಂಬುದನ್ನು ಹೇಳಿದ ಹಾಗಾಗಲಿಲ್ಲ.

ವಿದ್ಯೆಯಿಲ್ಲದವನೇ ಪಶು. ಎಂದರೆ, ಪಶುಗಳಿಗೂ ಮಾನವರಿಗೂ ಈ ವಿದ್ಯೆಯೇ ತಾರತಮ್ಯವೆಂದ ಹಾಗಾಯಿತು. ಈ ತಾರತಮ್ಯವು ಹೆಚ್ಚಿದಷ್ಟೂ ಅಷ್ಟು ವಿದ್ಯಾವಂತನೆಂದೆನಿಸಿಕೊಳ್ಳಬೇಕೆಂದಾಯಿತು. ಇದರಿಂದ ಮಾನವರಿಗೂ ಪಶುಗಳಿಗೂ ಇರುವ ವ್ಯತ್ಯಾಸವೇನು, ಇದನ್ನು ಹೆಚ್ಚಿಸುವ ಬಗೆ ಹೇಗೆ, ಇವುಗಳ ಕಡೆ ಗಮನ ಕೊಡಬೇಕಾದದ್ದು ಆವಶ್ಯಕವೆಂದಂತಾಯಿತು.

ಪಶುಗಳಲ್ಲಿ ನೈಸರ್ಗಿಕ ಬೋಧೆ (*Instinct*) ಯೇ ಪ್ರಬಲ; ಮಾನವರಲ್ಲಾದರೋ ಬುದ್ಧಿ ಕುಶಲತೆಯೇ (*Intelligence*) ಪ್ರಬಲ. ಮಾನವರಿಗೆ ನೈಜಬೋಧೆಗಳಿಲ್ಲವೆಂದಲ್ಲ; ಸಾಕಾದಷ್ಟಿವೆ ಆದರೆ ಆ ನೈಸರ್ಗಿಕ ಬೋಧೆಗಳನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊ

ಳ್ಳಲು, ಇವರಿಗೆ ಶಕ್ತಿಯಿದೆ. ಇದಕ್ಕೆ ಮಾನಸ ಶಾಸ್ತ್ರ ತತ್ವಜ್ಞರು 'ಪ್ರತಿಬಂಧ' (*Inhitition*) ವೆನ್ನುತ್ತಾರೆ. ಇದಕ್ಕೂ ಬುದ್ಧಿ ಕುಶಲತೆಗೂ ಬಹಳ ಸಂಬಂಧವಿದೆ. ಈ ಬುದ್ಧಿಕುಶಲತೆಯನ್ನು ಹೆಚ್ಚಿಸುವುದೇ 'ವಿದ್ಯೆ' ಎಂಬುವುದು, ಕೆಲವು ಮಾನಸ ಶಾಸ್ತ್ರ ತತ್ವಜ್ಞರ ಮತ.

ಪ್ರಾಪಂಚಿಕ ವ್ಯವಹಾರ ತಿಳಿಸದೆ ಇದ್ದರೆ ಅದು ವಿದ್ಯೆಯಲ್ಲವೆಂಬುದು ಕೆಲವರ ವಾದ. ಒಂದು ಕಥೆ ಇದಕ್ಕೆ ಉದಾಹರಣೆ ಕೊಟ್ಟಿದ್ದಾರೆ: ಕಳ್ಳರು ತಾವು ಬಂದು ದೋಚಿಕೊಂಡು ಹೋಗುವುದನ್ನು, ಮೊದಲು ಮನೆಯ ಯಜಮಾನನಿಗೆ ಬಂದು ಕಾಗದದ ಮೂಲಕ ತಿಳಿಸುವ ಪದ್ಧತಿಯಿದ್ದಿತಂತೆ. ಹಾಗೆ ಒಬ್ಬ ಆಚಾರ್ಯರಿಗೆ ಕಾಗದ ಬಂತು. ಓದಿ ನೋಡಿಕೊಂಡರು. ತಕ್ಷಣವೇ ಅದನ್ನು ತಪ್ಪಿಸಲು ಸುಲಭವಾದ ಒಂದು ಉಪಾಯ ಮನಸ್ಸಿಗೆ ಹೊಳೆಯಿತು; ತಮ್ಮ ಸ್ನೇಹಿತರೊಡನೆ ಹೇಳಿದರು. "ಹ್ಯಾಗೆ ಬರ್ತಾರೋ ಬರಲಿ. ಇವತ್ತಿನ ದಿನ ದೇವರ ನಿರ್ಮಾಲ್ಯವೆಲ್ಲಾ ಹೊಸಲಿನಲ್ಲೇ ಹಾಕ್ತೇನೆ. ಅದನ್ನು ತುಳಿಕೊಂಡು ಅದು ಹ್ಯಾಗೆ ಬರ್ತಾರೋ ನೋಡೋಣ!"

ಪ್ರಾಪಂಚಿಕ ವ್ಯವಹಾರವನ್ನು ತಿಳಿಸದಿದ್ದಲ್ಲಿ, ಬುದ್ಧಿಕುಶಲತೆ ಎಷ್ಟು ಹೆಚ್ಚು ಮಾಡಿದರೇನು, ಕೋಟ್ಯಾನುಕೋಟಿ ಪದಗಳನ್ನು ಬಾಯಲ್ಲಿ ಹಾಕಿಕೊಂಡರೇನು, ಅದು ವಿದ್ಯೆಯೆ? ಇದಕ್ಕಾಗಿಯೇ ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿ, ಪ್ರಾಪಂಚಿಕ ವ್ಯವಹಾರವನ್ನೇ ತಿಳಿಸುವ ಪಾಠಶಾಲೆಗಳನ್ನು ಸ್ಥಾಪಿಸಿ, ಆ ಮೂಲಕ ವಿದ್ಯೆಯನ್ನು ಕಲಿಸಲು ಏರ್ಪಾಟು ಮಾಡಿದ್ದಾರೆ.

ಆದುದರಿಂದ, ವ್ಯವಹಾರ ತಿಳಿಯದೆ, ಬುದ್ಧಿಕುಶಲತೆ ಪ್ರಯೋಜನವಿಲ್ಲ; ಹಾಗಿಲ್ಲದೆ, ಬುದ್ಧಿಕುಶಲತೆಯನ್ನು ಹೆಚ್ಚಿಸದೆ, ಬರೀ ವ್ಯವಹಾರವನ್ನೇ ತಿಳಿಸಿದರೆ ಅದು ವಿದ್ಯೆಯಲ್ಲ. ವ್ಯವಹಾರವನ್ನು ತಿಳಿಯುವುದು ಇಂದ್ರಿಯಗಳ ಮೂಲಕ. ಈ ಜ್ಞಾನೇಂದ್ರಿಯಗಳನ್ನೂ ಬುದ್ಧಿಕುಶಲತೆಯನ್ನೂ ಎರಡನ್ನೂ ತರಬೇತು ಮಾಡಿದಲ್ಲಿ, ವ್ಯಕ್ತಿಗೆ ವಿದ್ಯೆಯನ್ನು ಕಲಿಸಿದಂತೆಯೇ. ಇಂದ್ರಿಯಕ್ಕಿಂತಲೂ ರಸ ಪ್ರಾ

ಧಾನ್ಯ; ಈ ರಸ (*Emotion*) ಕ್ಕೆ ತೌರುಮನೆ ನೈಸರ್ಗಿಕ ಬೋಧೆ (*Instinct*) ಆದುದರಿಂದ ನೈಸರ್ಗಿಕ ಬೋಧೆ ಮತ್ತು ಬುದ್ಧಿಕುಶಲತೆ ಇವುಗಳನ್ನು ಸರಿಯಾದ ಮಾರ್ಗದಲ್ಲಿ ನಡೆಸುವುದೇ ವಿದ್ಯೆಯೆಂದ ಹಾಗಾಯಿತು. ನೈಸರ್ಗಿಕ ಬೋಧೆಯು ಮತ್ತು ಕುಶಲತೆಯು ಸಂಕಲನವೇ ವ್ಯಕ್ತಿ. ವ್ಯಕ್ತಿಯು ವ್ಯಕ್ತಿತ್ವವನ್ನು ಹೆಚ್ಚಿಸುವುದೇ ವಿದ್ಯೆಯ ಮೂಲತತ್ವ; ವ್ಯಕ್ತಿಗೂ ಸಮಷ್ಟಿಗೂ ಇರುವ ಸಂಬಂಧವನ್ನರಿತು, ವ್ಯಕ್ತಿಯು ಮತ್ತು ಸಮಷ್ಟಿಯು, ಇವೆರಡರ ಮೇಲ್ಮೆಗಾಗಿ ಪ್ರವರ್ತನೆಯನ್ನು ಕಲಿಯುವುದೇ ವಿದ್ಯೆ.

೨

ಕ್ರಿಮಿಕೀಟಾದಿಯಾಗಿ ಮನುಷ್ಯನವರಿವಿಗೂ, ಇರುವ ನೈಸರ್ಗಿಕ ಬೋಧೆಗಳಲ್ಲಿ ತನ್ನ ಜೀವವನ್ನು ಕಾಪಾಡಿಕೊಳ್ಳಬೇಕೆಂಬುದೇ *ಮೊದಲನೆಯದು. ಹಾಗೆ ಕಾಪಾಡಿಕೊಳ್ಳಲಾಗದವು ಮಿಕ್ಕವುಗಳ ಪಾಲಾಗಿ ನಿರ್ಮೂಲವಾಗುತ್ತವೆ.

ನಮ್ಮ ಮನೆಯಲ್ಲಿ ಒಂದು ಹಳೇ ಮಂಚವಿದೆ; ಅದರ ಕಾಲಿನ ಒಂದ ಮೂಲೆಯಲ್ಲಿ ಒಂದು 'ಜೇಡ' ಗೂಡು ಕಟ್ಟಿತ್ತು. ಅದು ಪೂರೈಸುವವರೆಗೂ ಸುಮ್ಮನಿದ್ದು, ಅನಂತರ ಕೆಡಸಿದೆ. ಮತ್ತೆ ಕಟ್ಟಿತು. ಪುನಃ ಕೆಡಿಸಿದೆ. ಹೀಗೆ ಮೂರುಸಲವಾದ ನಂತರ ಆ ಜೇಡ ಮತ್ತೆ ಕಟ್ಟಲು ಪ್ರಯತ್ನಪಡದೆ ಅಲ್ಲಿಂದ ಹೊರಟು ಹೋಯಿತು. ಮಾರನೆಯ ದಿನ ಮನೆಯ ಪಕ್ಕದಲ್ಲಿ ಸ್ವಲ್ಪ 'ಗಲೀಜಾದ' ಕಡೆ, ಅದೇ ಜೇಡ, ಹುಳುವಂತೆ ಓಡಾಡುತ್ತಿತ್ತು. ಏನು ಮಾಡುತ್ತೋ ನೋಡೋಣವೆಂದು ದೂರದಲ್ಲೇ ನಿಂತೆ. ಆ ಜೇಡನು ಸದ್ದು ಮಾಡದೆ ಕುಳಿತು, ನೊಣಗಳ ಕಡೆ ನೋಡುತ್ತಿತ್ತು. ನೊಣಗಳಾದರೋ ಜೇಡನ ಕೈಗೆ ಸಿಕ್ಕದೆ ಹಾರಿಹೋಗುತ್ತಿದ್ದವು. ಹೀಗೆಯೇ ಸ್ವಲ್ಪ ಹೊತ್ತು ಕಳೆಯಿತು. ನಾಲ್ಕಾರು ಸಲ ಜೇಡನು ಹಾರಿದ್ದು ನಿಷ್ಫಲವಾಯಿತು. ಅನಂತರ ಸ್ವಲ್ಪ 'ಜೇ ಹುಷಾರಾದ' ಒಂದು

* ಸ್ತ್ರೀ ವಿದ್ಯಾಭ್ಯಾಸ - ಸರಸ್ವತಿ - ಸಂಪುಟ - ೮ ಸಂಚಿಕೆ ೩.

ನೊಣದ ಕಡೆಗೆ ಈ ಜೇಡನು ಹಾರಿ, ಅದನ್ನು ಹಿಡಿದುಕೊಂಡಿತು. ನೊಣವು ಒದ್ದಾಡಿತು. ಅದನ್ನು ಬಿಡಿಸಲೋಸುಗವೋ ಏನೋ ಅಕ್ಕ ಪಕ್ಕದಲ್ಲಿದ್ದ ಕೆಲವು ನೊಣಗಳು ಜೇಡನ ಮೇಲೆ ಹಾರಾಡಿದುವು. ಜೇಡನು ಬಿಡಲಿಲ್ಲ. ಸುಮಾರು ಒಂದು ನಿಮಿಷದವರೆಗೆ ನೊಣವು ಒದ್ದಾಡಿ ಪ್ರಾಣ ಬಿಟ್ಟಿತು.

ಜೇಡನು ಗೂಡು ಕಟ್ಟುವುದು ತನಗೆ ಆಹಾರವನ್ನು ಒದಗಿಸಿ ಕೊಳ್ಳುವುದಕ್ಕೆ. ಗೂಡು ಕಟ್ಟಲು ಬೇಕಾದ 'ದಾರ' ವನ್ನು ತನ್ನ ಹಿಂಭಾಗದಿಂದ ಬಿಡುತ್ತದೆ. ಒಂದು ಜೇಡನಿಗೆ, ಸುಮಾರು ಮೂರು ಗೂಡುಗಳನ್ನು ಕಟ್ಟಲು ಸಾಕಾಗುವಷ್ಟು ದಾರವಿದ್ದಂತೆ ಕಂಡು ಬರುತ್ತದೆ. ಮೂರು ಗೂಡುಗಳೂ ಹಾಳಾದ ಮೇಲೆ ಜೇಡನು ತನ್ನ ಹಸಿವನ್ನು ತೀರಿಸಿಕೊಳ್ಳಲು, ಬೇರೆ ಮಾರ್ಗವನ್ನು ಹುಡುಕ ಬೇಕಾಗಿ ಬಂತು. ಗೂಡಿದ್ದಾಗ ನೊಣಗಳು ಗೂಡಿನಲ್ಲಿ ಸಿಕ್ಕಿಕೊಂಡು, ಜೇಡನಿಗೆ ತುತ್ತಾಗುತ್ತಿದ್ದುವು, ಈಗಲಾದರೋ, ಜೇಡನೇ ಹಾರಿ, ನೊಣಗಳನ್ನು ಹಿಡಿಯಲು ಮೊದಲು ಮಾಡಬೇಕಾಗಿ ಬಂತು.

ಇಂತಹ ಎರಡು ಜೇಡಗಳು ಒಂದು ಕಡೆ ಸೇರಿದರೆ, ಎರಡು ನಾಯಿಗಳು ಎಂಜಲೆಲೆಗೆ ಬಂದ ಹಾಗೆ. ಆದರೆ ಒಂದು ಜೇಡನು ಮತ್ತೊಂದನ್ನು ಕೊಂದೇ ಹಾಕಿಬಿಡುತ್ತೆ – ಕಾಡುಮನುಷ್ಯರಲ್ಲಿದ್ದಂತೆ. ನಾಗರಿಕ ಮನುಷ್ಯರು ಹೀಗೆ ಸಂಧಿಸಿದರೆ, ಅವರ ವ್ಯಾಜ್ಯವನ್ನು ತೀರಿಸಲು ನ್ಯಾಯಾಸ್ಥಾನವಿದೆ. ಅದೇ ಎರಡು ಜನಾಂಗಗಳು ಹೀಗೆ ಸೇರಿದರೆ ಯುದ್ಧ.

ತನ್ನ ವಂಶವನ್ನು ಶಾಶ್ವತಗೊಳಿಸಬೇಕೆಂಬುದೇ ಎರಡನೆಯ ಮುಖ್ಯ ನೈಸರ್ಗಿಕ ಬೋಧೆ. ಇದರಿಂದ ಹುಟ್ಟುವುದೇ ವಿಷಯಾಸಕ್ತಿ. ಇದನ್ನೂ ಮತ್ತು ಮಿಕ್ಕ ನೈಸರ್ಗಿಕ ಬೋಧೆಗಳಲ್ಲಿ *ಕೆಲವನ್ನೂ ತೆಗೆದುಕೊಂಡು, ಅವುಗಳ ವಿಚಾರವಾಗಿ ಮುಂದೆ ಹೇಳಲಾಗಿದೆ.

---

* 'ಆಟ' ದ ವಿಚಾರವಾಗಿ ಬೇರೆ ಒಂದು ಸಣ್ಣ ಪುಸ್ತಕ ಬರೆಯಬೇಕೆಂಬ ಉದ್ದೇಶದಿಂದ, ಅದನ್ನು ಇಲ್ಲಿ ಬಿಡಲಾಗಿದೆ.

# ನಗು

ಇಲ್ಲಿ 'ನಗು' ಎಂದರೆ ನಗಬಾರದೆಂದರ್ಥ. ಈ ಪ್ರಬಂಧದಲ್ಲಿ 'ನಗು'ವೆಂದರೇನು—ಎಂಬ ವಿಷಯವನ್ನು ಹೇಳುವುದಕ್ಕೆ ಮುಂಚೆಯೇ ಮಕ್ಕಳು ನಗುತ್ತಾರೆಂದು ಪ್ರಾರಂಭಿಸಬೇಕಾಗಿದೆ. ನಮ್ಮಲ್ಲಿ ಯಾರಾದರೂ ಅಪರಿಚಿತರು ಬಂದಲ್ಲಿ, ಮೊದಲನೆಯದು 'ಯಾವೂರು?' ಎರಡನೆಯದು 'ಎಲ್ಲಿಂದ ಬಂದಿರಿ?' ಮೂರನೆಯದು 'ಏತಕ್ಕೆ ಬಂದಿರಿ?' ನಾಲ್ಕನೆಯದು 'ಈ ಮನೆಯಲ್ಲಿ ಸ್ಥಳವಿಲ್ಲ, ಮುಂದಕ್ಕೆ ಹೋಗಿ' ಈ ರೀತಿ ಪ್ರಶ್ನೋತ್ತರಗಳು ವಾಡಿಕೆಯಲ್ಲಿವೆ. ಆದರೆ 'ನಗು' ನಮಗೇನೂ ಅಪರಿಚಿತನಲ್ಲ; ಆತನ ವಿಷಯ ನಮಗೆ ಅಷ್ಟು ವಿಶದವಾಗಿ ತಿಳಿದೂ ಇಲ್ಲ. 'ಯಾವೂರು?' ಊರೇ ಆಗಬೇಕೇನು ? ಹಳ್ಳಿಯೊಳಗಿಲ್ಲವೇನು? 'ಎಲ್ಲಿಂದ ಬಂದಿರಿ?' ಹೊಟ್ಟೆಯೊಳಗಿಂದ ಬರುವುದೂ ಉಂಟು. 'ಏತಕ್ಕೆ ಬಂದಿರಿ?' ಇದೇ ಇಷ್ಟಕ್ಕೆ ಸ್ವಲ್ಪ ಕಷ್ಟವಾದ ಪ್ರಶ್ನೆ—ಉತ್ತರ ನಾನಾ ಬಗೆಯಾಗಿದೆ. ಇವರಿಗೆ ಮಟ್ಟಿಗೆ 'ಈ ಮನೆಯಲ್ಲಿ ಸ್ಥಳವಿಲ್ಲ—ಮುಂದಕ್ಕೆ ಹೋಗಿ' ಎಂದು ಯಾವ ಪುಣ್ಯಾತ್ಮನೂ ಹೇಳಲಾರನು.

ಹುಟ್ಟಿದ ಕೆಲವು ಗಂಟೆಗಳಲ್ಲಿಯೇ ಮಕ್ಕಳು ನಕ್ಕಂತೆ ನಮಗೆ ತೋರುತ್ತದೆ; ಮತ್ತೆ ಕೆಲವುಮಕ್ಕಳಲ್ಲಿ ಸ್ವಲ್ಪ ದಿನಗಳಾದ ಅನಂತರ ಈ ಸೂಚನೆ ಕಾಣಬರುತ್ತದೆ. ಮಕ್ಕಳಿಗೆ ದೇವತೆಗಳು ಕಾಣುತ್ತಾರೆಂತಲೂ, ಅವರೊಡನೆ ಮಾತಾಡುವುದಾದರೆ ಈ ರೀತಿ ಕಾಣುತ್ತದೆಂಬುದು ಸಾಮಾನ್ಯ ಜನರ ಅಭಿಪ್ರಾಯ.

ಮತ್ತೆ ಕೆಲವರು, ಮಗುವು ಹಿಂದಣ ಜನ್ಮದ ಕರ್ಮಗಳನ್ನು ನೆನಸಿಕೊಂಡು ನಗುತ್ತದೆಂಬರು. ಇವೆರಡರ ಪೈಕಿ ಯಾವುದು ನಿಶ್ಚಯವೆಂಬುದು ತಿಳಿಯಲಸಾಧ್ಯವಾಗಿದೆ. ಇದನ್ನು ಪಾಶ್ಚಾತ್ಯ ದೇಶದಲ್ಲಿರುವ ಮನಶ್ಶಾಸ್ತ್ರಜ್ಞರು (*Psychologists*) ನೋಡಿ, ಕೆಲವು ಬಗೆಯ ಕಾರಣಗಳನ್ನು ಕೊಟ್ಟಿದ್ದಾರೆ.

ನಮಗೆ ಸಂತೋಷವಾದಾಗಲೆಲ್ಲಾ ನಾವು ನಗುತ್ತೇವೆಂಬುವುದು ಎಲ್ಲರಿಗೂ ತಿಳಿದಿಲ್ಲದೆ ಇಲ್ಲ. ಅತ್ಯಂತ ಸಂತೋಷವನ್ನು ಸೂಚಿಸಲು ನಗುವು ಹೊಟ್ಟೆಯೊಳಗಿನಿಂದ ಈಚೆಗೆ ಸುಗ್ಗುತ್ತದೆ. ಇದೇ ಕಾರಣವೆಂಬುದನ್ನು ಸ್ಥಾಪಿಸಲೋಸುಗ ಜನರ ವ್ಯವಹಾರವನ್ನು ಪರೀಕ್ಷಿಸಿದರೆ ಕೆಲವು ವಿಚಿತ್ರಾಂಶಗಳು ಕಂಡುಬರುತ್ತವೆ. ಸಾಮಾನ್ಯವಾಗಿ ಒಂದು ದೊಡ್ಡ ಪಟ್ಟಣದಲ್ಲಿ ವಾಸಮಾಡುವವರು ಅನೇಕ ವಿಧವಾದ ಜನರನ್ನು ನೋಡುತ್ತಾರೆ. ಕೆಲವರ ಉಡುಪನ್ನು ನೋಡಿ ನಗುತ್ತಾರೆ. ಕೆಂಪು ಅಂಗಿಯನ್ನು ತೊಟ್ಟು, ಹಚ್ಚಗಿರುವ ರುಮಾಲನ್ನು ಹಾಕಿಕೊಂಡರೆ ಕೆಲವರು ನಗುತ್ತಾರೆ; ಆ ಉಡುಪನ್ನೇ ಕೆಲವರು ಹೊಗಳುತ್ತಾರೆ. ನಮ್ಮನ್ನು ನಗಿಸಲೋಸುಗ ಒಂದು ಕಾಲಿಗೆ ಬಿಳುಪು, ಮತ್ತೊಂದಕ್ಕೆ ಕಪ್ಪು ಷರಾಯನ್ನು ಹಾಕಿಕೊಂಡು ವಿಕಟಕವಿಯು ಓಡಾಡುತ್ತಾನೆ. ಇದನ್ನು ನೋಡಿದೊಡನೆಯೇ ನಮಗೆ ನಗು ಉಕ್ಕಿಬರುತ್ತದೆ. ಇಲ್ಲಿ ನಮ್ಮ ಸಂತೋಷಕ್ಕೆ ಕಾರಣವೇನು? ಅವನನ್ನು ನೋಡಿದೊಡನೆಯೇ ನಾವು ಅವನಿಗಿಂತಲೂ ಚೆನ್ನಾಗಿ ಉಡುಪನ್ನು ಧರಿಸುತ್ತೇವೆಂದು ಸಂತೋಷವಿರಬಹುದೆ? ಇದಕ್ಕೆ ಒಬ್ಬ ಮನಶ್ಶಾಸ್ತ್ರಜ್ಞನು ಈ ಅಭಿಪ್ರಾಯವನ್ನು ಕೊಡುತ್ತಾನೆ. 'ಜನರೆಲ್ಲರೂ ಒಂದೇ ವಿಧವಾದ ಬಣ್ಣದ ಬಟ್ಟೆಯಲ್ಲಿ ಷರಾಯನ್ನು ಹೊಲಿಸಿ ಹಾಕಿಕೊಳ್ಳುತ್ತಾರೆ. ನಡತೆಗೆ ಅನುನಯಪಡಿಸಲು, ಕೆಲವು ಮಾದರಿ ಪೋಷಾಕನ್ನು ನೋಡಿ ನಗುತ್ತೇವೆ ಹೀಗೆ ಮಾಡಿ

ದರೆ ಆ ಪ್ರೋತ್ಸಾಹಕನ್ನು ಆ ವ್ಯಕ್ತಿಯು ಬಿಡುತ್ತಾನೆಂಬುದು ನಮ್ಮ ಅಭಿಪ್ರಾಯ.

ಅಂದರೆ ನಾವು ನಕ್ಕಾಗಲೆಲ್ಲಾ ವ್ಯಕ್ತಿಯನ್ನು ಸಮಷ್ಟಿಯ ನಡತೆಗೆ ಅನುನಯಪಡಿಸುವುದಕ್ಕಾಗಿ ಎಂದು ಅಭಿಪ್ರಾಯ ಪಡೋಣವೆ ? ಇದಕ್ಕೂ ಕೆಲವೆಡೆಗಳಲ್ಲಿ ತೊಂದರೆ ಬಂದೊದಗುತ್ತದೆ. ಸರ್ಕಸ್ಸಿನಲ್ಲಿ ಬಂದು ವಿಚಿತ್ರ ವ್ಯಕ್ತಿಯು ವಿರೂಪದಿಂದ ನಮ್ಮನ್ನು ನಗಿಸುತ್ತದೆ. ಅದು ಕೆಳಗೆ ಬಿದ್ದಾಗಲೆಲ್ಲಾ ನಾವು ನಗುತ್ತೇವೆ. ಈ ಸಂದರ್ಭದಲ್ಲಿ ಮೇಲೆ ಹೇಳಿದ ಕಾರಣವನ್ನು ಹೇಳಲಾಗುವುದಿಲ್ಲ. ಇದಕ್ಕೆ ಬೇರೆ ಕಾರಣವನ್ನು ಕಲ್ಪಿಸಿದ್ದಾರೆ. ಅದು ಬಿದ್ದಾಗಲೆಲ್ಲಾ ನಮಗೆ ಸ್ವಲ್ಪ ಸಂಕಟ (ಪಶ್ಚಾತ್ತಾಪ) ವಾಗುತ್ತದೆಂದೂ, ಆ ಸಂಕಟವನ್ನು ಹೋಗಲಾಡಿಸಲು ನಗುತ್ತೇವೆಂತಲೂ ಅಭಿಪ್ರಾಯ. ನಗುವಿಗೂ ಸಂಕಟಕ್ಕೂ ಬಹಳ ದೂರವಿದ್ದರೂ, ಸಂಕಟವನ್ನು ಹೋಗಲಾಡಿಸಿಕೊಳ್ಳಲು ನಗುವನ್ನು ಉಪಯೋಗಿಸುವುದು ಸಂರಕ್ಷಕರವಾದ ಉಪಕರಣವೆಂದು ವ್ಯವಹಾರದಲ್ಲಿರುತ್ತದೆ. ಇದಕ್ಕೆ ಸಾಕಾದಷ್ಟು ಉದಾಹರಣೆಗಳು ಸಿಗುತ್ತವೆ. ಮಕ್ಕಳು ಆಡುತ್ತಾ, ತಾಯಿತಂದೆಗಳ ಮುಂದೆ ಎಡವಿಬಿದ್ದರೆ ಬಹಳ ಸಂದರ್ಭಗಳಲ್ಲಿ ಅವರು ನಗುತ್ತಾರೆ ; ಒಂದೊಂದು ಸಲ ಅದರೊಡನೆ ಸಂಕಟ (ಪಶ್ಚಾತ್ತಾಪ) ಪಡುವುದೂ ಉಂಟು. ಅಭ್ಯಾಸವಿಲ್ಲದ ವ್ಯಕ್ತಿಯು ನಶ್ಯದ ಪುಡಿಯನ್ನು ಏರಿಸಿಕೊಂಡು ಸೀನುವಾಗ ಸುತ್ತಮುತ್ತಲಿನ ಜನರು ನಗಲಾರಂಭಿಸುತ್ತಾರೆ. ಚಂಡಾಟದಲ್ಲಿ ಅವರಿವರು ಬಿದ್ದಲ್ಲಿ ನೋಡುವವರೆಲ್ಲರೂ ನಗುತ್ತಾರೆ. ಇದರ ಅಂಶವನ್ನು ತಿಳಿದು ಬೈರನ್ (*Byron*) ಎಂಬ ಕವಿಯು '*I laugh so that I may not weep*' ಎಂದು ಅಭಿಪ್ರಾಯ ಕೊಟ್ಟಿರುತ್ತಾನೆ.

ಈ ಸೂತ್ರವನ್ನು ಸಹ ನಾವು ಕೆಲವು ಸಂದರ್ಭಗಳಲ್ಲಿ ಸಮಂಜಸವಾಗಿ ಉಪಯೋಗಿಸಲು ಸಾಧ್ಯವಲ್ಲ.

'ಕಿಟ್ಟ—ಮಹಾರಾಜನು ಯಾರನ್ನು ಕಂಡಾಗ ತನ್ನ ಟೋಪಿಯನ್ನು ತೆಗೆಯುತ್ತಾನೆ ?

ರಾಮು—ನನಗೆ ಗೊತ್ತಿಲ್ಲ. ನೀನೇ ಹೇಳು—

ಕಿಟ್ಟ—ಕ್ಷೌರಿಕನ ಎದುರಿನಲ್ಲಿ ಕುಳಿತಾಗ.......'

ಮತ್ತೆ ಕೆಲವು ಸಂದರ್ಭಗಳಲ್ಲಿ. ಈ ಸೂತ್ರದಿಂದ 'ನಗು' ಏತಕ್ಕೆ ಬರುತ್ತದೆಂಬುದನ್ನು ವಿಶದಪಡಿಸುವುದು ಕಷ್ಟವೆಂದು ಕಾಣಬರುತ್ತದೆ. ಪಾಶ್ಚಾತ್ಯರಲ್ಲಿ ಯುವಕಬಾಲಕಬಾಲಿಕಿಯರು ಒಬ್ಬರಿಗೊಬ್ಬರು ಹಸ್ತಲಾಘವವನ್ನು ಕೊಡುವಾಗ ಬಹಳಮಟ್ಟಿಗೆ ನಗುತ್ತಾರೆ. ಈ ಸಂದರ್ಭಗಳು ನಮ್ಮ ದೇಶದಲ್ಲಿ ಯಥೇಚ್ಛವಾಗಿ ಇನ್ನೂ ಆಗಲಿಲ್ಲ. ಒಬ್ಬರನ್ನೊಬ್ಬರು ಕುಚೇಷ್ಟೆಮಾಡುವಾಗಲೂ ನಗುತ್ತಾರೆ. ಇಲ್ಲಿ ಒಬ್ಬರನ್ನೊಬ್ಬರು ನೋಡಿದೊಡನೆಯೇ ಸಂಕಟವಾಗುತ್ತದೆಂದು ಹೇಳಬೇಕೆ ?

ನಗುವ ಗಂಡಸನ್ನೂ ಅಳುವ ಹೆಂಗಸನ್ನೂ ನಂಬಬಾರದೆಂಬ ಗಾದೆಯಿದೆಯಷ್ಟೆ. ಅಳುವುದು ಬುದ್ಧಿಯುಳ್ಳ ಹೆಂಗಸಿಗೆ ಹೇಗೆ ನೈಜಗುಣವೋ ಹಾಗೆಯೇ ನಗುವುದು ಬುದ್ಧಿವಂತನ ನೈಜಗುಣವೆಂಬ ಅಭಿಪ್ರಾಯದಿಂದ ಈ ಗಾದೆ ಹುಟ್ಟಿದೆಯೋ ಏನೋ ಕಾಣೆ. ಮಾತುಮಾತಿಗೆ ಕೆಲವರು ನಗುತ್ತಾರೆ. ಅವರನ್ನು ನಂಬಕೂಡದೆಂದು ಹೇಳಬೇಕೆ ? ಮತ್ತೆ ಕೆಲವರು ಎಂತಹ ಸಂದರ್ಭದಲ್ಲಿಯೂ ಕೂಡ, ನಗದೆ ಸುಮ್ಮನಿರುತ್ತಾರೆ. ಇವರನ್ನು ಯಾವಾಗಲೂ ನಂಬಬಹುದೆ ? ನಗುವನ್ನು ತಡೆಯುವುದು ವ್ಯಕ್ತಿಗೆ ಅತ್ಯಂತ ಕಷ್ಟವಾದ ಕೆಲಸಗಳಲ್ಲಿ ಒಂದಾಗಿದೆ. ಅಂತಹ ನಗುವನ್ನು ಯಾವ ವ್ಯಕ್ತಿಯು ಸ್ವಾಧೀನಮಾಡಿಕೊಂಡಿರುವನೋ ಅವನು ತನ್ನ ಮನಸ್ಸಿನಲ್ಲಿರುವ ಉದ್ದೇಶವನ್ನೂ ಸಹ ಮತ್ತೊಬ್ಬರಿಗೆ ತಿಳಿಯದಂತೆ ಮುಚ್ಚಲು ಶಕ್ತಿಯನ್ನು ಹೊಂದಿರುತ್ತದೆ. ಹೀಗಿರುವಲ್ಲಿ ಆ ವ್ಯಕ್ತಿಯ ನೈಜಸ್ವಭಾವವು ನಮಗೆ ಕಂಡುಬರುತ್ತದೆಂಬುದು

ಯಾವ ಭರವಸೆ? ಈ ಸೂತ್ರವನ್ನು ಸ್ವಲ್ಪಮಟ್ಟಿಗೆ ಎಳೆದಲ್ಲಿ ನಗದೆ ಇದ್ದವರನ್ನು ನಂಬುವುದೇ ಕಷ್ಟವೆಂದು ಹೇಳಬಹುದು.

ನಗುವವರಲ್ಲಿ ಎರಡು ವಿಧ: ಕೆಲವರು ವಿಚಿತ್ರ ಆಕೃತಿಗಳನ್ನು ನೋಡಿ ಬಹಳಮಟ್ಟಿಗೆ ನಗುತ್ತಾರೆ. ಬಾಬಯ್ಯನ ಹಬ್ಬದ ವೇಷಗಳು ಇವರಿಗೆ ಪರಮಾನಂದವನ್ನುಂಟುಮಾಡುತ್ತವೆ. ಕರಡಿವೇಷ, ಮುಖಕ್ಕಿಂತಲೂ ಮೂಗು ಉದ್ದವಾಗಿ ಮಾಡಿ ಮೂಗಿನ ಕೊನೆಯಲ್ಲಿ ಮೆಣಸಿನಕಾಯಿ ಹಾಕಿಕೊಳ್ಳುವುದು, ಬೂದಿತುಂಬಿದ ಕೋವಿಯಿಂದ ಅಲಂಕೃತವಾದ ಶಿಪಾಯಿ ಗೌಡನ ಕಿವಿಗೆ ಬೂದಿ ಊದುವುದು, ಇವೆಲ್ಲವನ್ನೂ ಕಂಡಲ್ಲಿ ಇವರಿಗೆ ಅತಿಯಾಗಿ ನಗು ಹುಟ್ಟುವುದಲ್ಲದೆ, ಅವನನ್ನೇ ಹಿಂಬಾಲಿಸುತ್ತಾರೆ. ಈ ತರದ ನಗುವನ್ನು ಆಕೃತಿ ವೈಚಿತ್ರ್ಯದ ನಗು' ಎಂದು ಕರೆಯಬಹುದು.

ಇನ್ನೊಂದು ಪಂಗಡದವರು ಈ ವಿಧವಾದ ಡೊಂಬಿ ವಿಚಿತ್ರಗಳನ್ನು ಕಂಡಲ್ಲಿ ಅಷ್ಟು ನಗುವುದಿಲ್ಲ. ಸಾಧಾರಣ ಜನರಲ್ಲಿ ನಗುವನ್ನು ಹುಟ್ಟಿಸದಿರುವುದು, ಇವರಲ್ಲಿ ತಡೆಯಲಾರದಷ್ಟು ನಗುವನ್ನು ಹುಟ್ಟಿಸುತ್ತದೆ. ಇದಕ್ಕೆರಡು ಉದಾಹರಣೆಗಳನ್ನು ಇಲ್ಲಿ ಕೊಡುತ್ತೇನೆ.

1. 'ಅಜ್ಜಿ--ಕಿಟ್ಟೀ, ಸಂಧ್ಯಾವಂದನ ಮಾಡಿದೆ ಏನೋ?

ಕಿಟ್ಟು—ಇಲ್ಲ ಅಮ್ಮಾ.

ಅಜ್ಜಿ—ಯಾಕೋ ಹೀಗೆ ಮಾಡುತ್ತೀ—

ಕಿಟ್ಟು—ಪುರೋಹಿತರು 'ಅರ್ಘ್ಯಬಿಟ್ಟರೆ ಎಷ್ಟೋ ಪುಣ್ಯಾ'! ಅಂದರು, ಅದಕ್ಕೆ ನಾನು ಸಂಧ್ಯಾವಂದನೆಯನ್ನೇ ಬಿಟ್ಟೆ....'

2. 'ತಂದೆ--(ಮಗನಿಗೆ) ಕಿಟ್ಟೂ, 'ಹಾಲು ಆರಿರುತ್ತದೆ' ಇದನ್ನು ಇಂಗ್ಲಿಷಿಗೆ ಭಾಷಾಂತರಮಾಡು.

ಕಿಟ್ಟು—Milk is six.'

'ನಗೆಗಡಲ'ಲ್ಲಿ ಇವೆರಡು ವಿಧಗಳಿಗೂ ಉದಾಹರಣೆಗಳು ಸಿಗುತ್ತವೆ. ಆದರೆ ಯಾವಯಾವುದಕ್ಕೆ ಎಷ್ಟೆಷ್ಟು ಮಂದಿ

ನಗುತ್ತಾರೆಂದು ಎಣಿಸಿದ್ದಲ್ಲಿ ದೊಂಬಿವಿಚಿತ್ರಗಳಿಗೆ ಸುಮಾರು ಸೇಕಡ ತೊಂಬತ್ತು ಬರುತ್ತದೆಂದು ತೋರುತ್ತದೆ. ನಗುವು ಮೊದಲು ದೊಂಬಿ ವಿಚಿತ್ರದಿಂದ ಹುಟ್ಟಿದರೂ, ಬೆಳೆಯುತ್ತ ಬೆಳೆಯುತ್ತ, ವ್ಯಕ್ತಿಯ ಶಿಕ್ಷಿತತ್ವವು ತಕ್ಕಮಟ್ಟಿಗೆ ಸಂಪೂರ್ಣವಾದಾಗ, ಆ ದೊಂಬಿ ವಿಚಿತ್ರಗಳನ್ನು ಬಿಟ್ಟು, ಸೂಕ್ಷ್ಮರೂಪದ ವಿಚಿತ್ರಗಳ ಮೇಲೆ ಹೋಗುತ್ತದೆ. ಸಾಹಿತ್ಯದ ಅಭಿರುಚಿಯು ವ್ಯಕ್ತಿಯ ನಗುವಿನಿಂದ ಸಾಕಾದಷ್ಟುಮಟ್ಟಿಗೆ ವ್ಯಕ್ತಪಡುತ್ತದೆ. ಕೆಲವು ಸಂದರ್ಭಗಳಲ್ಲಿ ಈ ನಗುವಿನಿಂದ ವ್ಯಕ್ತಿಯ ಬುದ್ಧಿಕುಶಲತೆಯನ್ನು ಪರೀಕ್ಷಿಸಬಹುದು. ಯಾವನೊಬ್ಬರು ಕಾಂಭೋಜಿ ರಾಗದಲ್ಲಿ ಪಲ್ಲವಿ ಅನುಪಲ್ಲವಿ ಹಾಡಿ, ಚರಣವನ್ನು ಮಾಯಾಮಾಳವಗೌಳದಲ್ಲಿ ಹಾಡಿದರೆ, ನಗುವ ವ್ಯಕ್ತಿಯ ಸಂಗೀತ ಜ್ಞಾನವನ್ನು ಪರೀಕ್ಷಿಸಿದಂತಾಗುವುದಿಲ್ಲವೆ? ಇಂತಹ ಪ್ರಶ್ನೆಗಳು ಈಗಲೂ ವಾಡಿಕೆಯಲ್ಲಿವೆ. 'ವಿನಾಯಕನ ಹಬ್ಬ ಏಕಾದಶಿ ದಿನ ಬಂದರೆ ಏನು ಮಾಡಬೇಕು —ಉಪವಾಸವೆ? ಹಬ್ಬವೆ?' ಉತ್ತರ ಕೊಡುವವನ ಬುದ್ಧಿಕುಶಲತೆಯು ಇದರಿಂದ ಗೋಚರವಾಗುತ್ತದೆ. ಹಾಗೆಯೇ ನಗುಬರುವಂಥದುದನ್ನು ಹೇಳಿ ನಗುವವನ ಬುದ್ಧಿಕುಶಲತೆಯನ್ನು ಕಂಡುಹಿಡಿಯಬಹುದು.

ನಗುವಿನಿಂದ ಮಕ್ಕಳ ಶಿಕ್ಷಣವನ್ನು ಸಮರ್ಪಕವಾಗಿ ಮಾಡಬಹುದೇ ಎಂಬ ಪ್ರಶ್ನೆಯು ಈಗ ಕೆಲವು ಮನಶ್ಶಾಸ್ತ್ರಜ್ಞರಲ್ಲಿ ಹುಟ್ಟಿದೆ. ನಮ್ಮ ದೇಶದ ಶಿಕ್ಷಣ ಕ್ರಮವು, ಮಕ್ಕಳ ಸ್ವಭಾವಶಕ್ತಿ ಸ್ವಾಧೀನಪ್ರವೃತ್ತಿ, ಸಹಜವಾದ ಆಕಾಂಕ್ಷೆ ಇವುಗಳ ಕಡೆಗೆ ಎಷ್ಟರಮಟ್ಟಿಗೆ ಗಮನಕೊಟ್ಟಿದೆ ಎಂಬುದು ಎಲ್ಲರಿಗೂ ತಿಳಿದೇ ಇದೆ. ನಮ್ಮಲ್ಲಿ ಮಕ್ಕಳನ್ನು ಶಿಕ್ಷೆಯಲ್ಲಿಡಬೇಕಾದರೆ, ಮೊದಲನೆಯದು ಅವುಗಳನ್ನು ಹೆದರಿಸಬೇಕೆಂಬುದೇ. ರಾತ್ರಿ ಮಕ್ಕಳು ನಿದ್ರೆಮಾಡದಿದ್ದರೆ 'ಬೂಚಿ ಬಂದು ಹಿಡಿದುಕೊಂಡು ಹೋಗುತ್ತಪ್ಪ. ಕಣ್ಣು ಮುಚ್ಚು'

ಎನ್ನುತ್ತೇವೆ. 'ಆಚೆಗೆ ಹೋದರೆ ಗೊಗ್ಗ ಹಿಡಿದುಕೊಳ್ಳು ತ್ತಾನೆ' 'ಅಪ್ಪ ಬಂದು ಬೆತ್ತ ತಗೊಂಡು ಬಲಿಹಾಕುತ್ತಾನೆ' 'ಆಗೋ ಅವಸ್ಮಾ—ತಾಯಿ ಬಂದ' ಇವೇ ಮುಂತಾದ ಮಂತ್ರ ಗಳಿಂದ ಮಕ್ಕಳ ಶಿಕ್ಷಣೆಯನ್ನು ಪೂರ್ತಿಮಾಡುತ್ತೇವೆ. ಕತ್ತ ಲಾಗುತ್ತಲೆ ಮಕ್ಕಳಿಗೆ ಬೂಚಿಗಳು ಬರುತ್ತವೆ. ಆ ಮಕ್ಕಳಿ ಗೆ ಕತ್ತಲೂ ಬೂಚಿಯೂ ಬೇರೆಬೇರೆಯಾಗಿಲ್ಲ; ಕತ್ತಲೆಂದರೆ ಬೂಚಿ, ಗೊಗ್ಗಯ್ಯ ಇವೆಲ್ಲಾ ಇವೆಯೊಂದೇ ಅರ್ಥ. ದೊ ಡ್ಡವರಾದ ಮೇಲೆ ಕೂಡ ಕತ್ತಲಲ್ಲಿ ಆಚೆಗೆ ಹೋಗಲು ಹೆದರಿಕೆ.

ಮತ್ತೊಂದು ಸ್ವಾರಸ್ಯವಾದವಿಷಯ, ಪ್ರತಿನಿತ್ಯವೂ ನಾವು ನೋಡುತ್ತಲೂ ಕೇಳುತ್ತಲೂ ಇದ್ದೇವೆ; ಮಕ್ಕಳನ್ನು ಅಳಿಸಿ, ಅವಕ್ಕೆ ಬೇಕಾದುದದನ್ನು ಕೊಡುವುದು. ಎತ್ತಿಕೊಳ್ಳಬೇ ಕಾದರೆ ಅಳುವುದಕ್ಕೆ ಮುಂಚೆ ಎತ್ತಿಕೊಳ್ಳುವುದಿಲ್ಲ; ತಾಯಿ ಯು, ಅತ್ತ ಹೊರತು ಎತ್ತಿಕೊಳ್ಳದಿರಲು ಮಗುವು ಅದೇ ಉಪಾಯವನ್ನು ಹಿಡಿದು ಸಲಸಲಕ್ಕೂ ಅಳುವುದಕ್ಕೆ ಮೊದಲು ಮಾಡಿ ಕೊನೆಗೆ, ತನಗೇನು ಬೇಕಾದರೂ ಅತ್ತರೆ ತಂದುಕೊ ಡುತ್ತಾರೆಂದು ಅಳುವುದಕ್ಕೆ ಪ್ರಾರಂಭಿಸುತ್ತದೆ. ಮನೆಯಲ್ಲಿ ಆರೇಳು ಮಕ್ಕಳಿದ್ದು, ಎಲ್ಲರೂ ಒಟ್ಟಿಗೆ ಮೇಳವನ್ನು ಮಾಡಿ ದಲ್ಲಿ, ಮನೆಯಲ್ಲಿರುವವರಿಗೆಷ್ಟು ಆನಂದವೋ, ನೀವೇ ಊಹಿ ಸಬಹುದು. ಈ ಅಭ್ಯಾಸವನ್ನು ತಪ್ಪಿಸಿ ಇದರ ಬದಲಾಗಿ ನಗುವುದನ್ನು ಕಲಿಸಬಾರದೇಕೆ ?

ಈ ಪ್ರಪಂಚದಲ್ಲಿ ವ್ಯಕ್ತಿಯು ಕಾರ್ಯಗಳಲ್ಲಿ ಸೋಲು ಗೆಲ ವುಗಳನ್ನು ಎಣಿಸಿದರೆ, ಸೋಲೇ ಹೆಚ್ಚೆಂಬುವುದರಲ್ಲಿ ಸಂಶಯ ವಿಲ್ಲ. ಯಾವ ಕಾರ್ಯದಲ್ಲಿ ಸೋತರೂ, ಮೊದಲು ಎಲ್ಲರಿ ಗೂ ಬರುವುದು ಅಳುವು. ಇದರಿಂದ ಇರುವ ಧೈರ್ಯವೂ ಕೆಟ್ಟು, ಎರಡುಮೂರು ಸಲ ಸೋತೊಡನೆಯೋ ಎದೆಯೊಡೆ ದು ಪ್ರಾಣವನ್ನು ಬಿಡಬೇಕಾಗಿ ಬಂದೀತು. ಇದರ ಬದಲಾಗಿ

ನಗುವನ್ನು ಅಭ್ಯಸಿಸಬಾರದೇಕೆ ? ಸೋತೊಡನೆಯೇ ಆ ಸಂಕಟವನ್ನು ಹೋಗಲಾಡಿಸಲು ನಕ್ಕರೆ, ಸುತ್ತಮುತ್ತಲಿನ ಜನರಿಗೂ ಅಷ್ಟು ಅನಿಷ್ಟ ಕಾಣುವುದಿಲ್ಲ. ಅಲ್ಲದೆ ಧೈರ್ಯ ಕುಂದುವುದಕ್ಕೆ ಬದಲಾಗಿ ಇಮ್ಮಡಿಮಾಡಿಕೊಂಡಂತಾಗುವುದು.

ರೋಗಿಗಳಿಗೆ ನಗುವುದಕ್ಕಾಗುವುದಿಲ್ಲ. ನಗುವು ದೇಹಕ್ಕೆ ಪುಷ್ಟಿ ಕೊಡುತ್ತದೆಂಬ ಅಭಿಪ್ರಾಯವು ರೂಢಿಯಲ್ಲಿದೆ. 'Laugh and grow fat' ಎಂಬುದನ್ನು ಆಗಾಗ ನಾವು ಕೇಳುತ್ತಲೇ ಇರುತ್ತೇವೆ. ಸೃಷ್ಟಿಯಲ್ಲಿರುವ ಪ್ರಾಣಿಗಳಲ್ಲೆಲ್ಲಾ ಮನುಷ್ಯನೇ ಉತ್ತಮ ವ್ಯಕ್ತಿ. ಮನುಷ್ಯನಿಗಲ್ಲದೆ ಮತ್ತಾವ ಪ್ರಾಣಿಗೂ ಈ ನಗುವನ್ನು ಪರಮೇಶ್ವರನು ಕೊಟ್ಟಿಲ್ಲ. ಇದರಲ್ಲಿರುವ ಸಾರವನ್ನು ಪರೀಕ್ಷಿಸಿದಲ್ಲಿ ಮನುಷ್ಯನ ಸ್ವಜಸ್ವಭಾವಗಳಿಗೆ, ಯಾವುದಕ್ಕಾದರೂ, ಕುಂದುಬಂದರೆ ತತ್‌ಕ್ಷಣವೇ ನಗುವಿನ ಮೂಲಕ ತಪ್ಪಿಸಿಕೊಳ್ಳಬಹುದೆಂದು ತೋರುತ್ತದೆ. ಆದುದರಿಂದ ಮಕ್ಕಳ ಶಿಕ್ಷಣದಲ್ಲಿಯೂ ಸಹ ಇದಕ್ಕೆ ಗಮನಕೊಟ್ಟು, ಮಕ್ಕಳಿಗೆ ನಗುವನ್ನು ಕಲಿಸುವುದು ನಮ್ಮ ಕರ್ತವ್ಯವಲ್ಲವೆ ?



# ಭಯ

"ಢಂ-ಢಂ! ಹೋ!! ಮನೆಗೆ ಬೆಂಕಿ ಬಿತ್ತು!!!" ಬೆಚ್ಚಿಬಿದ್ದು ಎಲ್ಲಿಯೋರು ಅಲ್ಲಿ ಓಡೋದೇ. ಇದು ಮನುಷ್ಯನಿಗೇ ಅಲ್ಲ, ಮೃಗಗಳಿಗೂ ಕೂಡ ಸಹಜ. ಕಾಡಿನಲ್ಲಿ ವಾಸಮಾಡುವವರಿಗೆ ಮೃಗಗಳನ್ನು ಓಡಿಸಲು ಬೆಂಕಿ ಎಷ್ಟು ಉಪಕಾರಿ ಎಂಬುದು ತಿಳಿದ ಅಂಶವೇ. ಕ್ರಿಮಿಗಳ ಮೊದಲು ಆನೆಯಂತಹ ಪ್ರಾಣಿಯವರೆಗೂ ಈ 'ಭಯ'ವು ಸ್ವಜವಾದದ್ದೇ.

ಹುಲಿಯನ್ನು ಕಂಡರೆ ಭಯ; ಬೇರೆ ದೇಶದ ಜನರು ದಂಡೆತ್ತಿ ಬರುತ್ತಾರೆಂದರೆ ಭಯ. ನಾಲ್ಕು ಜನರೆದುರಿನಲ್ಲಿ ತಿಳಿದದ್ದನ್ನು ಹೇಳಲು ಭಯ; ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತೇನೋ ಅಥವಾ ಇಲ್ಲವೋ ಎಂಬ ಭಯ. ಈ ರೀತಿಯಾಗಿ 'ಭಯ'ವನ್ನು ಹಲವು ಬಗೆಯ ಅರ್ಥ ಕೊಡುವಂತೆ ಉಪಯೋಗಿಸುತ್ತಲಿದ್ದೇವೆ. ಇದೇ 'ಭಯ'ವೇ ವಿಪರೀತವಾಗಿ ಪ್ರಾಣಕ್ಕೆ ತೊಂದರೆ ಬಂದೊದಗುವ ಪಕ್ಷದಲ್ಲಿ, ಇದನ್ನು 'ಪ್ರಾಣಭಯ'ವೆನ್ನುತ್ತೇವೆ. ನಾಲ್ಕು ಜನರೆದುರಿನಲ್ಲಿ ಮಾತನಾಡಲು ಭಯಪಟ್ಟರೆ 'ಸಭಾಕಂಪ'; ಸೇನೆಯನ್ನು ನೋಡಿ ಭಯಪಟ್ಟು ಓಡಲಾರಂಭಿಸಿದರೆ 'ಉತ್ತರನ ಪೌರುಷ.' ಈ ವಿಧವಾಗಿ ಬೇರೆ ಪದಗಳಿಂದ ತಿಳಿಸಿದಾಗ್ಯೂ, ಸಾಮಾನ್ಯವಾಗಿ ಇವೆಲ್ಲಕ್ಕೂ 'ಭಯ'ವೆಂಬ ಒಂದೇ ಅಂಶವನ್ನೇ ಒತ್ತಿ ಹೇಳುತ್ತೇವೆ.

ಹುಲಿಯನ್ನು ಕಂಡರೆ ಭಯ. ಏತಕ್ಕಾಗಿ? ಹುಲಿಗೆ ಮನುಷ್ಯನನ್ನು ತಿನ್ನುವ ಶಕ್ತಿಯಿದೆ; ತಿನ್ನುವುದೂ ಉಂಟು. ನಾನು ಮನುಷ್ಯ. ಈ ತಿಳಿವಳಿಕೆಯಿಂದ ಹುಲಿಯನ್ನು ನೋಡಿದರೆ ಭಯ. 'ಹಸು ಮಗು'ವನ್ನು ಹುಲಿಯ ಮುಂದೆ ಬಿಟ್ಟಲ್ಲಿ, ಅದಕ್ಕೆ ಈ ತಿಳಿವಳಿಕೆಯಿಲ್ಲವಾಗಿ ಭಯವಿದ್ದಂತೆಯೇ ತೋರುವುದಿಲ್ಲ. ರಾವಣಾಸುರನನ್ನು ವಾಲಿಯು ಕೊಂಡೊಯ್ದು, ಅಂಗದನ ತೊಟ್ಟಿಲಿಗೆ ಕಟ್ಟಲು, ಆ ಹತ್ತು ತಲೆಯವನನ್ನು ನೋಡಿ ಮಗುವು ನಗುವುದಕ್ಕೆ ಮೊದಲುಮಾಡಿತಂತೆ. ಅದೇ ದಶಕಂಠನು ಸೀತಾಸ್ವಯಂವರ ಮಂಟಪವನ್ನು ಹೊಕ್ಕು, ಶಿವಧನುಸ್ಸನ್ನೆತ್ತಲು ಜನಕಮಹಾರಾಯನು ನಡುಗಲಾರಂಭಿಸಿದನು.

ಹುಲಿಯನ್ನು ಕಂಡರೆ ಭಯವಿದ್ದಾಗ್ಯೂ, 'ಹುಲಿ ಬೇಟೆ'ಗೆ ಹೊರಡುವುದನ್ನು ನೋಡಿದ್ದೇವೆ. ಹುಲಿಯನ್ನೆದುರಿಸುವ ಧೈರ್ಯವು ಬಂದದ್ದು ಹೇಗೆ? ತುಪಾಕಿ ಅಥವಾ ಪಿಸ್ತೂಲು, ಇವುಗಳ ಮೂಲಕ. ಹುಲಿಯ ಪೌರುಷವು ಇವುಗಳ ಮುಂದೆ ನಡೆಯುವುದಿಲ್ಲವೆಂಬ ತಿಳಿವಳಿಕೆ. ಅವೂ ಅಲ್ಲದೆ ಅವುಗಳ ಸ್ವಭಾವ ಚನ್ನಾಗಿ ತಿಳಿದವನಿಗೆ, ಅವುಗಳನ್ನು ಕಂಡರೆ ಲಕ್ಷ್ಯವೇ ಇಲ್ಲ. 'ಸರ್ಕಸ್ಸಿ'ನಲ್ಲಿ ಹುಲಿಗಳು ನಾಯಿಗಳಂತೆಯೇ.

ಯಾವುದಾದರೂ ಒಂದು ಸಣ್ಣ ಜಂತು ಮನೆಯಲ್ಲಿ ಓಡಾಡುತ್ತಿದೆ ಎಂಬೋಣ. ಅದು ಎಂದೂ ಕಾಣದ್ದಾದರೆ, ಅದನ್ನು ನೋಡಿದೊಡನೆಯೇ ಭಯ. ಚಿಕ್ಕಮಕ್ಕಳಿಗಾದರೋ 'ಅದೇನೋ ಓಡಾಡುತ್ತಿದೆ. ಅದೇನಿರಬಹುದು? ಅದನ್ನು ಹಿಡಿದು ನೋಡೋಣ' ವೆಂಬ ಕುತೂಹಲ. ಒಂದೊಂದು ಬಗೆಯ 'ಭಯ'ಕ್ಕೆ ಒಂದೊಂದು ಕಾರಣ ಕಂಡುಬಂದಾಗ್ಯೂ, ಒಟ್ಟಿನಲ್ಲಿ ಹೀಗೆ ಹೇಳಬಹುದು. ಯಾವುದಾದರೂ

ಒಂದು ವಿಷಯವಾಗಲಿ ಅಥವಾ ವಸ್ತುವಾಗಲಿ, ನಮಗೆ ಸ್ವಲ್ಪಮಟ್ಟಿಗೆ ತಿಳಿದು, ಸಾಕಾದಷ್ಟು ತಿಳಿಯದಿದ್ದರೆ, ಭಯವಾಗಲಿ ಅಥವಾ ಅದನ್ನು ಚೆನ್ನಾಗಿ ತಿಳಿಯಬೇಕೆಂಬ ಕುತೂಹಲವಾಗಲಿ ಹುಟ್ಟುತ್ತದೆ; ತಿಳಿದುಕೊಳ್ಳಲಸಾಧ್ಯವಾದಲ್ಲಿ 'ಭಯ'ವೇ ಪ್ರಾಮುಖ್ಯತೆಯನ್ನು ಹೊಂದುತ್ತದೆ.*

ಮನೆಯಲ್ಲಿ ಏನಾದರೂ ತಪ್ಪು ಮಾಡಿದಲ್ಲಿ, ತಂದೆಯು ಬಂದಕೂಡಲೇ ಏನು ಮಾಡುತ್ತಾನೋ ಎಂಬ ಭಯ. ತಂದೆಯು ಮನೆಗೆ ಬಂದಮೇಲೆ, ಅದರ ಸುದ್ದಿಯೇ ಎತ್ತದಿದ್ದರೆ, ಯಾವಾಗ ತಿಳಿಯುತ್ತದೆಯೋ ಎಂಬ ಭಯ. ತಾಯಿಯೋ ಅಥವಾ ಮತ್ತಾರಾದರೂ 'ತಿಳಿಸುತ್ತೇನೆ' ಎಂದರೆ ಭಯ; ತಿಳಿಸಿಬಿಟ್ಟರೆ ಭಯ ಅರ್ಧ ಕಡಿಮೆ ಆದಹಾಗೇ. ತಂದೆಯೇನೂ ಮಾಡದೆ 'ಇನ್ನು ಮುಂದೆ ಹೀಗೆ ಮಾಡಿದಲ್ಲಿ ನಿನಗೆ ತಕ್ಕ ಶಿಕ್ಷೆ ಮಾಡುತ್ತೇನೆ' ಎಂದರೆ ಒಂದು ವಿಧವಾದ ಭಯ; ಹಾಗಲ್ಲದೆ ನಾಲ್ಕೇಟನ್ನು ಹಾಕಿದಲ್ಲಿ, 'ಇಷ್ಟೇ ತಾನೆ...'

"....ರಿಗೆ ಪ್ಯಾಸಾಗದೇ ಉಂಟೇನೋ !"

"ಅದೇನೋಪ್ಪ ! ನಾನು ಅವರ ಮನೆಗೆ ನಿನ್ನೆ ಹೋಗಿದ್ದೆ. ಚನ್ನಾಗಿ ಮಾಡಲಿಲ್ಲ ; III ಕ್ಲಾಸಿನಲ್ಲಿ ಕೂಡ ಬಗೋ ಹಾಗಿಲ್ಲ—ಎಂದರು."

---

*'The prestige of mystery by which so many adults are still influenced is compounded of fear and curiosity'

—Larguier des Bancels.

"ಸರಿ-ಅವರಿಗೆ ಆಗದಿದ್ದಮೇಲೆ ಇನ್ನಾರಿಗೂ ಆಗೋ ಹಾಗಿಲ್ಲ. ಎಂ.ಎ., ಪ್ಯಾಸು ಮಾಡೋದು ಅಷ್ಟು ಕಷ್ಟವಾದರೆ, ಯಾರೂ ಮಾಡೋ ಹಾಗೇ ಇಲ್ಲ!"

ಇದು ನಮ್ಮ ಉಪಾಧ್ಯಾಯರ ವಿಚಾರ; ನಾನು ಕಾಲೇಜಿನಲ್ಲಿ ಓದುತ್ತಿರುವಾಗ ಅವರು ಎಂ.ಎ., ಪರೀಕ್ಷೆಗೆ ಕಟ್ಟಿದ್ದರು. ಹುಡುಗರು-ನಮಗೆ ಅವರ ವಿಚಾರ ಗೊತ್ತಿಲ್ಲವೇ! ಖಂಡಿತವಾಗಿ ಅವರು ತೇರ್ಗಡೆಯಾಗಲೇಬೇಕೆಂದು ನಮ್ಮ ಸಿದ್ಧಾಂತ. ಆದರೆ ಅವರಿಗೆ ಮಟ್ಟಿಗೆ ಆ ವಿಚಾರದಲ್ಲಿ 'ಭಯ'ವೇ. ಇದಾದ ಒಂದು ವಾರದಮೇಲೆ ನಮ್ಮ ರಾಘುವನೇ ಬಂದು ಹೇಳಿದ—

"....ರಿಗೆ ಎಂ.ಎ., I ಕ್ಲಾಸಿನಲ್ಲಿ ಆಯಿತಂತೋ! ಈಗ ತಾನೇ 'ಟೆಲಿಗ್ರಾಂ' ಬಂತು."

ನಾನು ಹೋಗಿ ಆತನನ್ನು ಕೇಳಿದೆ.

"ಏನು ಸಾರ್, ಪ್ಯಾಸೇ ಆಗೋದಿಲ್ಲ ಎಂದಿರಿ!"

"ನನಗೆ ಆಗ ಹಾಗೆ ತೋಚಿತು. ಈಗಲೂ ನಾನು ಬರೆದದ್ದು ನನಗೆ ಸರಿಯಿಲ್ಲ. ಅವರಿಗೆ ಚನ್ನಾಗಿರಬಹುದು!"

ಇದಕ್ಕೆ ಕಾರಣ ಬೇರೆ. ಮನೆಯಲ್ಲಿ ಕಾಪಾಡ್ವ ವ್ಯಸನ ಹೆಚ್ಚಾಗಿ, ಆತನಿಗೆ ಓದಲು ಅವಕಾಶವಿರಲಿಲ್ಲ. ಎಂ.ಎ., ಆಗದಿದ್ದಲ್ಲಿ ಆತನಿಗೆ ಯಾವ ವಿಧವಾದ ಉತ್ತೇಜನವೂ ಸಿಗುತ್ತಿರಲಿಲ್ಲ. ಆತನ ಜೀವಮಾನವೆಲ್ಲಾ ಆ M.A., ಮೇಲಿತ್ತು. ಇದರಿಂದ 'ಪ್ಯಾಸ್' ಆಗುತ್ತೋ ಇಲ್ಲವೋ ಎಂಬ ಸಂಶಯವು ಹುಟ್ಟಿ, ಆ ಸಂಶಯವೇ ಭಯವಾಗಿ ಪರಿಣಮಿಸಿತು.† ವ್ಯಕ್ತಿ

---

† Transference (Ribot). Studies in Psycho-analysis by Bandovin—p. 55

ಭೇದದಿಂದ ಈ ‘ಭಯ’ವು, ನಾನಾರೀತಿಯಲ್ಲಿ, ವಿಚಿತ್ರವಿಧಿಗಳನ್ನನುಸರಿಸಿ ನಡೆದಂತೆ ಕಂಡುಬರುತ್ತದೆ. ಆದರೆ ಇದರ ಮೂಲವನ್ನು ತಿಳಿದೊಡನೆಯೇ ‘ಭಯ’ದಲ್ಲಿರುವ ಭಯವು ಮಾಯವಾಗುತ್ತದೆ.

ದಾರಿಯಲ್ಲಿ ಹೋಗುತ್ತಿದ್ದ ಹಾಗೆಯೇ, ಎದುರಿಗೆ ಒಂದು ದೊಡ್ಡ ಹುಲಿಯು ಬಾಯ್ದೆರೆದು ಕಾದಿದೆ ಎಂಬೋಣ. ಅದನ್ನು ನೋಡಿದೊಡನೆಯೇ, ಎದೆಯೊಡೆದು, ಅಲ್ಲಿಂದ ಓಡೋದೇ; ಅಥವಾ, ಭಯವು ವಿಪರೀತವಾದರೆ ಓಡುವುದಕ್ಕೂ ಕಾಲು ಬರುವುದಿಲ್ಲ. ಅದನ್ನು ನೋಡಿದೊಡನೆಯೇ, ಕಣ್ಣುಗಳಲ್ಲಿರುವ ಸೂಕ್ಷ್ಮಭಾಗಗಳು ‘ಇದು ಹುಲಿ’ ಎಂಬ ವಿಚಾರವನ್ನು ಮೆದುಳಿಗೆ ತಿಳಿಸುತ್ತವೆ. ಕೂಡಲೆ ಮೆದಳು ‘ಅಪಾಯ! ಓಡಬೇಕು’ ಎಂದು ನಿರ್ಧರಿಸುತ್ತದೆ. ಅಲ್ಲಿಂದ ಅದು ಕಾಲುಗಳಿಗೆ ಓಡುವಂತೆ ಆಜ್ಞಾಪಿಸುತ್ತದೆ. ‘ಭಯ’ವು ವಿಪರೀತವಾದರೆ ಕಾಲುಗಳು ಹೇಳಿದ ಮಾತನ್ನು ಕೇಳುವುದಿಲ್ಲ. ಹೀಗೆಯೇ ‘ಭಯ’ವು ಪಂಚೇಂದ್ರಿಯ ಮೂಲಕ ಹೊಗುತ್ತದೆ. ಇದ್ದಕ್ಕಿದ್ದ ಹಾಗೆ ವಿಚಿತ್ರವಾದ ಆಕಾರವನ್ನು ನೋಡಿದರೆ ಭಯ; ಎಂದೂ ಕೇಳದ ಶಬ್ದವಾದರೆ ಭಯ; ಅಕಸ್ಮಾತ್ತಾಗಿ ಶಬ್ದವಾದರೂ ಭಯ; ಎಂದೂ ಮುಟ್ಟದೆ ಇದ್ದದ್ದನ್ನು ಮುಟ್ಟಲು ಭಯ. (McDougall—The emotion of *fear* is the psychological translation of the instinct of *flight*. For discussion on this, see p. 79—Studies in Psycho-analysis by Bandovin, translated by E. & C. Pasel.)

ಕತ್ತೆಕಿರುಬಗಳಿಗೆ ಈ ‘ಭಯ’ವೇ ಆಹಾರವನ್ನು ಒದಗಿಸಿಕೊಡುತ್ತದೆ. ಇವುಗಳ ಕೈಗೆ ಮನುಷ್ಯನು ಸಿಕ್ಕಿಬಿದ್ದರೆ ಅವು

ಮೇಲೆ ಬಿದ್ದು ತಿನ್ನುವುದಿಲ್ಲವಂತೆ. ಅವನು ಆಚೆಗೆ ಹೋಗದ ಹಾಗೆ ಸುತ್ತಲೂ ನಿಂತುಕೊಳ್ಳುತ್ತವೆ. ಅವನಿಗೆ ಭಯವು ಹೆಚ್ಚಾಗುತ್ತಾ, ಏನು ಮಾಡುವುದಕ್ಕೂ ತೋಚದೆ ಕೈಕಾಲು ಬಿದ್ದುಹೋಗಿ, ಆ ಭಯದಿಂದಲೇ ಪ್ರಾಣಬಿಟ್ಟಮೇಲೆ, ಅವು ತಿನ್ನುತ್ತವೆಂದು ವದಂತಿ.

ಜಿರಳೆಯನ್ನು ಕಂಡರೆ ಒಬ್ಬರಿಗೆ ಭಯ ; ಇಲಿಯನ್ನು ಕಂಡರೆ ಮತ್ತೊಬ್ಬರಿಗೆ ಭಯ. ಒಬ್ಬರಿಗೆ ಭಯವನ್ನುಂಟು ಮಾಡುವ ವಸ್ತುವು ಮತ್ತೊಬ್ಬರಿಗೆ ಭಯವನ್ನುಂಟುಮಾಡದೆ ಇರಬಹುದು. 'ಬಾಜಯ್ಯ ವೇಷ'ವನ್ನು ನೋಡಿದರೆ ಮಕ್ಕಳಿಗೆ ಭಯ ; ನಮಗೋ ನಗು. ಜೇಮ್ಸ್ ದಿ ಫಸ್ಟ್ (James the First) ಕತ್ತಿಯನ್ನು ನೋಡಿದರೆ ನಡುಗುತ್ತಿದ್ದನಂತೆ. ಆದರೆ ಆತನು ರಣಹೇಡಿಯಲ್ಲ. ಇದಕ್ಕೆ ಕಾರಣ ರಿಜ್ಜಿಯೋ ಎಂಬಾತನನ್ನು ಕೊಂದದ್ದಿರಬಹುದು (Direction of Desire by Bligh). 'ಎಲೆಕ್ಟ್ರಿಕ್ ಬಲ್ಬ್' ಹಾಕುವಾಗ ಒಂದು ಸಲ 'ಝುಳ' (Shock) ತಗುಲಿದರೆ ಮತ್ತೊಂದು ಸಲ ಹಾಕಲು ಹೋಗುವಾಗ ಸ್ವಲ್ಪ ಹೆದರಿಕೆಯೋ !

“ಮಂತ್ರಕ್ಕೆ ಮಾವಿನಕಾಯಿ ಉದುರುತ್ತೆಯೆ ! ಹುಡುಗರನ್ನ ಹೊಡಿಯದಿದ್ದರೆ ಅವರಿಗೆ ಭಯವಿರುತ್ತದೆಯೆ ? ಭಯವಿಲ್ಲದೇ ಇದ್ದರೆ 'ಓದು-ಗೀದು' ಎಲ್ಲಾ ನಡೆಯುತ್ತದೆಯೆ ? ದಂಡಂ ದಶಗುಣಂ ಭವೇತ್. ಸುಮ್ಮನೆ ನಾಲ್ಕು ಚನ್ನಾಗಿ ಹಾಕಿದರೆ, ಹುಡುಗ ಬುದ್ಧಿವಂತನಾಗುತ್ತಾನೆ. ಛಡಿ ತೋರಿಸದಿದ್ದರೆ ಹುಡುಗ ಮಡ್ಡಿಯಾಗೋದೋ (Spare the rod and spoil the child=ಛಡಿ ಬಿಟ್ಟರೆ ಪೋರ ಮಡ್ಡಿ). ಹುಡುಗರು ಮುಂದಕ್ಕೆ ಬರಬೇಕಾದರೆ, ಅವರಿಗೆ

'ಭಯ'ವಿರಬೇಕು. ಉಪಾಧ್ಯಾಯರನ್ನು ಕಂಡರೆ ಸುಮ್ಮನೆ ನಡುಗಬೇಕು—ಆಗಲೇ ಅವನಿಗೇನಾದರೂ ಬರಬೇಕಾದರೆ" ಈ ಅಭಿಪ್ರಾಯವೇ ನಮ್ಮಲ್ಲಿಯೂ, ಬೇರೇ ಜನಾಂಗದವರಲ್ಲಿಯೂ, ಅನೇಕ ಶತಮಾನಗಳಿಂದ ನೆಲೆಯಾಗಿದೆ. 'ಭಯ'ದ ಮೂಲಕ ಸಾತವಾಡಿಸಬೇಕು. ತುಂಟಹುಡುಗರನ್ನು ದಾರಿಗೆ ತರಬೇಕಾದರೆ-ಕೋದಂಡಕ್ಕೆ ಹಾಕಬೇಕು. ಆಗ 'ಭಯ' ಬರುತ್ತೆ, ತುಂಟತನ ನಿಂತುಹೋಗುತ್ತೆ. ಮಗುವನ್ನು ಪಾಠಶಾಲೆಗೆ ಕಳುಹಿಸಿದೊಡನೆಯೇ, ಅದಕ್ಕೆ 'ಭಯ'ವನ್ನು ಮೊದಲು ಹುಟ್ಟಿಸಬೇಕೆಂಬ ಪ್ರಯತ್ನ.

ಪಾಶ್ಚಿಮಾತ್ಯ ಮಾನಸಶಾಸ್ತ್ರಜ್ಞರು--ಮಕ್ಕಳಿಗೆ ಈ ಭಯವೆಂಬ ಭಾವವನ್ನೇ ತಿಳಿಸಬಾರದೆಂದು ಒತ್ತಿಹೇಳುತ್ತಿದ್ದಾರೆ. ಮಕ್ಕಳಿಗೆ ಈ 'ಭಯ'ದಿಂದ ಕೇಡೇ ಹೊರತು ಒಳ್ಳೆಯದಿಲ್ಲವೆಂದು ನಾನಾವಿಧವಾಗಿ ತೋರಿಸುತ್ತಲಿದ್ದಾರೆ. ಅವರ ಮುಖ್ಯ ತತ್ವ, ಮಕ್ಕಳನ್ನು ಸ್ವೇಚ್ಛೆಯಾಗಿ ಬಿಡಬೇಕೆಂಬುದೇ! *ಬೂಚಿ, ಗೊಗ್ಗಯ್ಯ ಈ ಮಂತ್ರಗಳಿಂದ ಅವರನ್ನು ತರಬೇತು ಮಾಡಿದಲ್ಲಿ, ಅವರ ಜೀವಮಾನವೆಲ್ಲಾ ಈ ಬೂಚಿ, ಗೊಗ್ಗಯ್ಯಗಳ ವಿಚಾರದಲ್ಲೇ ಕಳೆಯಬೇಕಾಗುತ್ತದೆ. ಮಕ್ಕಳನ್ನು ಸ್ವೇಚ್ಛೆಯಾಗಿ ಬಿಟ್ಟಾಗ್ಯೂ, ಅವರ ಪ್ರಾಣಕ್ಕೆ ತೊಂದರೆ ಬಂದೊದಗುವ ಸಂದರ್ಭದಲ್ಲಿ, ಅವರಿಗೆ ಸಹಾಯಮಾಡಿ ಉಳಿಸುವದಕ್ಕೆ, ನಾವು ಸಿದ್ಧನಾಗಿರಬೇಕಾದದ್ದು—ಇಲ್ಲಿ ಸ್ವೇಚ್ಛೆಯಾಗಿ ಬಿಡಬೇಕೆಂದು ಯಾರೂ ಹೇಳಲಾರರು.

---

* Claustrophobia. Case of Gerard. p.161. Studies in Psycho-analysis, by Bandovin.

''ಆಚಾರ್ರೆ, ನಿಮ್ಮಗ ಬೇವಿನಕಾಯಿ ತಿಂತಾನೆ—''

''ಕಹಿಯಾದರೆ ಅವನೇ ಬಿಡ್ತಾನೆ.''

ಅವರವರು ಮಾಡುವ ಕೆಲಸಗಳ ಪರಿಣಾಮವು ಅವರಿಗೇ ತಿಳಿಯುವಂತೆ ಮಾಡಬೇಕು.

''ಶೆಟ್ರೆ, ನಿಮ್ಮಗ ತುಪ್ಪ ಚೆಲ್ಲಿದ.''

''ಅಯ್ಯೋ ಅವನು ಯಾವಾಗಲೂ ಹಾಗೆಯೇ.'' (ಮನಸ್ಸಿನಲ್ಲಿ) ಏನೋ ಇರಬೇಕು. ನಮ್ಮ ಹುಡುಗ ಹಾಗೆಲ್ಲಾ ಸುಮ್ಮನೆ ಚೆಲ್ಲೋದಿಲ್ಲ.

ಶೆಟ್ರ ಮಗ ತುಪ್ಪ ತೆಗೆದುಕೊಂಡು ಬರುತ್ತಿದ್ದ. ದಾರಿಯಲ್ಲಿ ಒಂದು ಸವರನ್ ಬಿದ್ದಿತ್ತು. ಅದನ್ನು ತೆಗೆದುಕೊಳ್ಳಲು ತುಪ್ಪವನ್ನು ಚೆಲ್ಲಿದ. ತುಪ್ಪವನ್ನು ಬಳಿಯುವ ನೆಪದಲ್ಲಿ ಸವರನ್ನೂ ಅದರೊಳಗೆ ಬಳಿದುಕೊಂಡ. ಹುಡುಗನ ವಿಚಾರ ಶೆಟ್ರಿಗೆ ಚೆನ್ನಾಗಿ ಗೊತ್ತು. ಹೀಗೆಯೇ ಹುಡುಗರು ಏನು ಮಾಡಿದಾಗ್ಯೂ. ಅದಕ್ಕೆ ಕಾರಣವೇನೆಂದುಕೊಂಡರೆ, ಮಾಡುವುದು ಸಹಜವೆಂದು ತಿಳಿದುಬರುವುದೂ ಅಲ್ಲದೆ, ಅದಕ್ಕೆ ತಕ್ಕ ಉಪಾಯವೂ ಕೂಡ ಸಿಕ್ಕಂತೆಯೇ. ಅದಲ್ಲದೆ ಸುಮ್ಮನೆ ಭಯಪಡಿಸಿದರೆ ಯಾವ ವಿಧವಾದ ಉಪಕಾರವೂ ಮಾಡಿದಹಾಗಲ್ಲ.

ಉಪಕಾರ ಮಾಡುವುದಂತಿರಲಿ ; ಅನೇಕ ವೇಳೆಗಳಲ್ಲಿ ಅಪಕಾರವೇ ಆಗುತ್ತದೆ. ರಾಮೂಗೆ ಲೆಖ್ಖ ಮಾಡುವುದಕ್ಕೆ ಬರುವುದಿಲ್ಲವೆಂಬೋಣ. ಅವನು ಮಾಡದಿದ್ದರೆ, ಅವನನ್ನು ಚನ್ನಾಗಿ ಹೊಡೆದರೆ, ಮಾಡಲಾಗುವುದೆಂದು ಕೆಲವರ ಮತ; ಅಂದರೆ 'ಭಯ'ದ ಮೂಲಕ ಮಾಡಲು ಸಾಧ್ಯವೆನ್ನುವ ಮತ.

ನಲಸಲಕ್ಕೂ, ಪ್ರತಿ ಒಂದು ಲೆಕ್ಕಕ್ಕೂ ಏಟು ಬೀಳುತ್ತಿದ್ದರೆ, ರಾಮುಗೂ ಲೆಕ್ಕಕ್ಕೂ ಎಷ್ಟರಮಟ್ಟಿಗೆ ವಿಶ್ವಾಸವೋ ಸ್ವಲ್ಪ ಯೋಚಿಸಿ. ಲೆಕ್ಕ 'ಪೀರಿಯಡ್' (Period) ಬಂದೊಡನೆಂಯೇ 'ಅಯ್ಯೋ ಬಂತಲ್ಲಪ್ಪ! ಈ ಹಾಳು ಲೆಕ್ಕ ಯಾಕಿಟ್ಟರಪ್ಪ!' ಈ ವಿಧವಾದ ಆಲೋಚನೆಯೇ! ಹೀಗಾಗಿ ಲೆಕ್ಕವೆಂದರೆ, ಅಲ್ಲಿಂದ ರಾಮು 'ಪರಾರಿ'ಯಾಗುವ ಸಂಭವವೇ. ಇದೇ 'ಭಯ'ವು ಅವನ ಜನ್ಮಾವಧಿ ನಾಟಿದಂತೆಯೇ ಸರಿ. ತೆನ್ನಾಲ ರಾಮಕೃಷ್ಣನು ಬೆಕ್ಕಿಗೆ ಹಾಲು ಕುಡಿಸಿದಂತೆಯೇ! ಬಿಸಿಹಾಲಿನಿಂದ ಮೂತಿ ಸುಟ್ಟಮೇಲೆ, ಹಾಲು ತೋರಿಸಿದರೆ ಓಡುವುದೇ. ಹೀಗೆಯೇ ಮಕ್ಕಳ ಸ್ವಭಾವವೂ ಕೂಡ. ಲೆಕ್ಕ - ಹೊಡೆತ, ಇವೆರಡೂ ಒಟ್ಟಿಗೆ ಸೇರಿದರೆ, ಲೆಕ್ಕವೆಂದರೆ ಹೊಡೆತ ತಿಂದ ಹಾಗೆಯೇ. "ಪಾಯಸದ ಬಿಸಿ ತಗುಲಿದ ಮಗು, ಮೊಸರನ್ನೂ ಊದೋದೇ." ಭಯ ಸಂಕಟ ಮುಂತಾದುವುಗಳೊಡನೆ, ಏನು ಹೇಳಿಕೊಟ್ಟರೂ ಅದು ಬರುವುದೂ ಇಲ್ಲ; ಜ್ಞಾಪಕದಲ್ಲಿರುವುದೂ ಇಲ್ಲ. ಇದಕ್ಕೆ ಸಾಕಾದಷ್ಟು ಪ್ರಮಾಣಗಳು ದೊರೆತಿವೆ. (Case of Marcel. No. 2. Studies in Psycho-analysis Baudouin—p.p 176. The Psycho-analytical Method by Pfister, translated by Dr. Payne, p. 221 and for *emoticn* p.51.)

ಭಯದಿಂದ ಮನುಷ್ಯನ ಮೆದುಳು ಅವನ ಸ್ವಾಧೀನ ತಪ್ಪುತ್ತದೆಂದು ಹೇಳಬೇಕಾಗಿಲ್ಲ. ಮೈಕೈಯೆಲ್ಲಾ ನಡುಕಹುಟ್ಟಿದರೆ, ಆ ಸಮಯದಲ್ಲಿ ಯಾವುದಾದರೂ ಒಂದು ಲೆಕ್ಕ ಮಾಡೆಂದರೆ, ಹೇಗೆ ಮಾಡುವುದು? ಹುಡುಗನ ಮುಂದೆ 'ಛಡಿ'ಯನ್ನು ತೋರಿಸುತ್ತಾ, 'ನಾಲ್ಕು ನಾಲ್ಕು ಎಷ್ಟು' ಎಂದರೆ,

ಅವನು ಏನು ಬೇಕಾದರೂ ಹೇಳಬಹುದು ; ಎಷ್ಟೋ ಮಕ್ಕಳಿಗೆ 'ಭಯ'ದಿಂದ ಜ್ವರ ಬರುತ್ತದೆ ; ಇದು ಮನೆಯ ಹೆಂಗಸರಿಗೂ ಗೊತ್ತು.

ಕೆಲವರಿಗೆ 'ಲೆಖ್ಖ'ದಲ್ಲಿ ಬುದ್ಧಿ ಓಡೋದಿಲ್ಲವೆನ್ನುತ್ತಾರೆ. ಇದು ಹುಟ್ಟುತ್ತಲೇ ಹೀಗೆಂದು ಕೆಲವರ ಅಭಿಪ್ರಾಯ. ಆದರೆ ಮುಕ್ಕಾಲು ಪಾಲು, 'ಲೆಕ್ಕ' ಬರದೆ ಇರುವುದಕ್ಕೆ ಹುಟ್ಟು ಕಾರಣವಲ್ಲ; ಈ 'ಭಯ'ವೇ ಕಾರಣ. 'ಭಯ' ವನ್ನೂ 'ಲೆಖ್ಖ'ವನ್ನೂ ಒಟ್ಟಿಗೆ ಸೇರಿಸಿ ಮುಂದಿಟ್ಟರೆ, ಬರುತ್ತ ಬರುತ್ತ, 'ಲೆಖ್ಖ'ವು ಮಾಯವಾಗಿ, 'ಭಯ'ವೇ ನಿಲ್ಲುತ್ತದೆ. ಹುಡುಗನು 'ಲೆಖ್ಖ' ಮಾಡಿ, ಉಪಾಧ್ಯಾಯನಿಗೆ ತೋರಿಸಿದರೆ, 'ಮಡ್ಡಿ, ನಿನಗೆಲ್ಲಿ ಬರುತ್ತೋ-ಕತ್ತೆ' ಎಂದು ತಲೆ ಮೇಲೆ ಒಂದು ಹಾಕಿದರೆ-ಸಲಸಲಕ್ಕೂ ಹೀಗೇ ಆದರೆ, 'ನಾನು ಮಡ್ಡಿ, ನನಗೆ ಲೆಖ್ಖ ಬರೋದಿಲ್ಲ' ಈ ರೀತಿಯಾದ ಅಭಿಪ್ರಾಯವು ಆ ಹುಡುಗನಿಗೆ ಹುಟ್ಟಿ, 'ಲೆಖ್ಖ' ಮಾಡಲು ಮನಸ್ಸೇ ಬರದೆ, 'ಲೆಖ್ಖ'ಕ್ಕೆ ಬದ್ಧದ್ವೇಷಿಯಾಗುತ್ತಾನೆ. ಲೆಖ್ಖ ಮಾಡುವುದರಿಂದ ಅವನಿಗೆ ಇಲ್ಲದ ಸಂಕಟವೊದಗುತ್ತದೆಂದರೆ, ಯಾರು ತಾನೆ, ಲೆಖ್ಖ ಮಾಡಲು ಅಪೇಕ್ಷಿಸುತ್ತಾರೆ ? (Displacement. Baudouin writes, 'transference attended by forgetfulness, complete or partial—').

'ಭಯ'ದಿಂದ ಈ ರೀತಿಯಾಗಿದೆ ಎಂದು ತೋರಿಸುವ ಬಗೆ ಹೇಗೆ ? ಇದು ಭಯವನ್ನು ನಿರ್ಮೂಲ ಮಾಡುವುದರಿಂದ. ಆಮೇಲೂ, ಅವನು ಹಾಗೆಯೇ ಇದ್ದರೆ, ಅದು ಹುಟ್ಟುತ್ತಲೇ ಬಂದದ್ದೆಂದು ಹೇಳಬೇಕೇ, ಹೊರತು ತೆಗೆದು ಹಾಕುವುದಕ್ಕೆ ಮುಂಚೆ ಸಿದ್ಧಾಂತಮಾಡಕೂಡದು. ಈ 'ಭಯ' ವನ್ನು ನಿರ್ಮೂಲ ಮಾಡುವುದು ಹೇಗೆ ? 'ಭಯ'ದಿಂದ ಒದಗಬಹು

ಬಾದ ಸಂಕಟವನ್ನು ನಿರ್ಮೂಲಮಾಡುವುದರಿಂದ ; ಇದೂ ಅಲ್ಲದೆ ಸಂಕಟದ ಬದಲಾಗಿ, ಅವನಿಗೆ ಸ್ವಲ್ಪಮಟ್ಟಿಗೆ ಉತ್ಸಾಹವನ್ನುಂಟುಮಾಡುವುದರಿಂದ. ಮೊದಲನೆಯ ಸಲ ಲೆಖ್ಖವನ್ನು ತಪ್ಪು ಮಾಡಿದರೆ, ಅವನನ್ನು ದೊಣ್ಣೆಯಿಂದ ಹೊಡೆಯುವುದರ ಬದಲು, 'ಇದು ಸರಿ, ಇದೂ ಸರಿ. ನೋಡು ಇಲ್ಲೇ ಸ್ವಲ್ಪ ತಪ್ಪು—ಎರಡು ಎರಡು ಎಷ್ಟೋ—ನೋಡು ಐದು ಹಾಕಿದ್ದೀಯಲ್ಲೋ—ಇದು ಸರಿಮಾಡಿದರೆ ಆಯ್ತಪ್ಪ. ನೋಡು ಈ ಚಿಕ್ಕ ಹುಡುಗ ಮಾಡ್ಬಿಟ್ಟ, ನಿನ್ನ ಕೈಲಾಗದೇನೋ' ಎನ್ನುತ್ತಲೂ, 'ಹೋದಸಲಕ್ಕಿಂತಲೂ ಈ ಸಲ ವಾಸಿ, ಇನ್ನೂ ಚೆನ್ನಾಗಿ ಮಾಡಬೇಕು—ಇನ್ನೊಂದು ಸಲ ಮಾಡು, ಸರಿಯಾಗಿ ಬರುತ್ತೆ. ಬೇಷ್' ಎನ್ನುತ್ತಲೂ ಪ್ರೋತ್ಸಾಹ ಕೊಟ್ಟು, ನೋಡಬೇಕು. ಮಕ್ಕಳಿಗೆ ತಾವು ಮಾಡಿದ ಕೆಲಸ ಸರಿ ಎಂದರೆ ಎಷ್ಟೋ ಸಂತೋಷ ; ಈ ಸಂತೋಷವೇ ಅವರಿಗೆ ಮತ್ತಷ್ಟು ಪ್ರೋತ್ಸಾಹ ಕೊಡುವುದು. ಒಬ್ಬರಮೇಲೊಬ್ಬರಿಗೆ ಪೋಟಾಪೋಟಿ, ಅವನು ಹತ್ತು ಮಾಡಿದರೆ ನಾನು ಇಪ್ಪತ್ತು ಮಾಡಬೇಕೆಂಬ ಆಸೆ ಹುಟ್ಟುತ್ತೆ.

ಮನುಷ್ಯನಿಗೆ ಬಂದೊದಗುವ ಕಷ್ಟಪರಂಪರೆಗಳನೇಕಕ್ಕೆ, ಬಹಳಮಟ್ಟಿಗೆ ಭಯವೇ ಕಾರಣ. ಆದಾಗ್ಯೂ, ಇದರಿಂದ ಉಪಕಾರವೂ ಸ್ವಲ್ಪಮಟ್ಟಿಗುಂಟು. 'ಭಯ'ದ ಮೂಲಕ ಪ್ರಾಣಿಗಳು ತಮಗೆ ಬಂದೊದಗುವ ಅಪಾಯಗಳನ್ನು ಬೇಗನೆ ತಿಳಿದುಕೊಳ್ಳುತ್ತವೆ ; ಅಪಾಯದಿಂದ ಪಾರಾಗಲು ಯತ್ನಪಡುತ್ತವೆ. ಹಾವನ್ನು ನೋಡಿದೊಡನೆಯೇ ನಮಗೆ 'ಭಯ'ವುಂಟಾಗದಿದ್ದಲ್ಲಿ, ಅದರಮೇಲೆ ಕಾಲಿಟ್ಟು ಅದರಿಂದ ಕಚ್ಚಿಸಿಕೊಂಡು ಪ್ರಾಣಬಿಡುವ ಸಂಭವವುಂಟು.

ಕೆಲವು ಸಂದರ್ಭಗಳಲ್ಲಿ ವ್ಯಕ್ತಿಯನ್ನು ಸಮಷ್ಟಿಗೆ ಅನುನಯಪಡಿಸಲು ಭಯವು ಸಹಕಾರಿ. ಕಾನೂನಿನಲ್ಲಿ ಈ ತರದ

ಭಯವುಂಟು. ಸಮಷ್ಟಿಗೆ ತೊಂದರೆಯುಂಟಾಗುವ ಕೆಲಸ ಮಾಡಿದಲ್ಲಿ ಶಿಕ್ಷೆಯಾಗುತ್ತೆಂಬ ಭಯದಿಂದ ಸುಮ್ಮನಿರುವುದೂ ಉಂಟು.

ಯಾವ ಭಯದಿಂದ ವ್ಯಕ್ತಿಗೆ ಅನುಕೂಲವೋ, ಅದನ್ನು ಮಾತ್ರ ಇಟ್ಟುಕೊಂಡು, ಮಿಕ್ಕವುಗಳನ್ನು ಹೋಗಲಾಡಿಸಲು ಪ್ರಯತ್ನಪಡುವುದು ಪ್ರತಿ ಒಬ್ಬರ ಕರ್ತವ್ಯ. ಮಕ್ಕಳನ್ನು ತರಬೇತು ಮಾಡುವಾಗ, ಇದನ್ನು ಮನಸ್ಸಿನಲ್ಲಿಟ್ಟುಕೊಳ್ಳವಿದ್ದರೆ, ಅವರಿಗೆ ನಾವಾಗಿನಾವೇ, ಅನೇಕ ಕಷ್ಟಪರಂಪರೆಗಳನ್ನು ತಂದಿಟ್ಟಂತೆಯೇ! 'ಭಯ'ವು ಆವರಿಸಿದೊಡನೆಯೇ, ಇದೇತಕ್ಕಾಗಿ ಒದಗಿತೆಂದು ಪರಿಶೋಧಿಸಲು ಪ್ರಯತ್ನಮಾಡಿದರೆ, ಅದು ತಾನಾಗಿ ತಾನೇ ಕಡಿಮೆಯಾಗಿ, ಕತ್ತಲಲ್ಲಿ ಕಂಡ ಹಗ್ಗವನ್ನು ಹಾವೆಂದು ಭ್ರಮಿಸಿದಂತೆ, ಮಾಯವಾಗುತ್ತದೆ. ದೇಶವನ್ನು ಕಾಪಾಡುವುದು, ಉದ್ಧಾರಮಾಡುವುದು, ಕೋಟೆ ಕೊತ್ತಲುಗಳಲ್ಲ, ಮದ್ದುಗುಂಡುಗಳಲ್ಲ ; ಭಯರಹಿತರಾದ, ಧೀರರಾದ ಹುಡುಗರು. ನವರಸಗಳಲ್ಲಿ ಒಂದಾದ ಈ ರಸದ, ಸಾರವನ್ನು ವಿದ್ಯಾವಂತನಾದ ಪ್ರತಿ ಒಬ್ಬ ಮನುಷ್ಯನೂ ತಿಳಿಯಬೇಕಾದದ್ದೇ. ಅಲ್ಲವೆ ?

# ಪರಿಶೋಧಕತ್ವ

ಮೊಟ್ಟ ಮೊದಲು ಬೆಂಗಳೂರಿನಲ್ಲಿ ವಿದ್ಯುಚ್ಛಕ್ತಿಯ ದೀಪಗಳನ್ನು ಹಾಕಿದಾಗ ನಾನಲ್ಲಿದ್ದೆ. ಒಂದು ದಿನ ಎಲ್ಲವನ್ನೂ ಹಚ್ಚುತ್ತಾರೆಂದು ಡಂಗುರ ಹೊಡಿಸಿದರು. ಆ ದಿನ ಸಾಯಂಕಾಲ ಆರು ಗಂಟೆಯಿಂದ ಮನೆಯಲ್ಲಿರುವ ಹೆಂಗಸರು ಮಕ್ಕಳು ಎಲ್ಲರೂ ಬೀದಿಬಾಗಲಿನಲ್ಲಿ ಕುಳಿತು ಹಚ್ಚುವುದನ್ನು ನೋಡಬೇಕೆಂದು ಕಾದಿದ್ದರು.

"ಇದಕ್ಕೆ ಬತ್ತಿ ಎಲ್ಲಿದೆ ?"

"ಎಣ್ಣೆ ಎಲ್ಲಿಂದ ಬರುತ್ತೆ ?"

"ಎಲ್ಲಾ ಒಟ್ಟಿಗೆ ಹಚ್ಚುತ್ತಾರೆಯೆ ?"

"ಅಷ್ಟು ಎತ್ತರ ಏಣಿ ಬೇಕಲ್ಲ !"

ಹೀಗೆಯೇ ಒಬ್ಬೊಬ್ಬರೂ ಅವರವರಿಗೆ ತೋಚಿದುದನ್ನು ಹೇಳುತ್ತಾ ಕುಳಿತಿದ್ದೆವು. ಆರುವರೆ ಸಮಯದಲ್ಲಿ ಇದ್ದಕ್ಕಿದ್ದ ಹಾಗೆಯೇ ಅವು ಹತ್ತಿಕೊಂಡು ಉರಿಯಲಾರಂಭಿಸಿದವು. ಒಂದು ನಿಮಿಷದೊಳಗಾಗಿ ಸಾವಿರಾರು ಹತ್ತಿದುದನ್ನು ನೋಡಿ ಎಲ್ಲರಿಗೂ ಪರಮಾಶ್ಚರ್ಯವಾಯಿತು. ಎಲ್ಲರೂ ಏತಕ್ಕಾಗಿ ಕುಳಿತಿದ್ದೆವು ? ಇದು ಹೇಗಾಗುತ್ತೋ ನೋಡೋಣವೆಂದು ಇದಕ್ಕೆ ಕಾರಣವೇನೆಂದರೆ, ಹೊಸ ವಿಷಯವನ್ನು ಕೇಳಿದಾಗಲೆಲ್ಲಾ ಅಥವಾ ಹೊಸ ಪದಾರ್ಥವನ್ನು ನೋಡಿದಾಗಲೆಲ್ಲಾ ನಮ್ಮಲ್ಲಿರುವ "ಪರಿಶೋಧಕತ್ವ" (Curiosity) ನಮ್ಮನ್ನು ಅದರ ಕಡೆ ಸೆಳೆಯುತ್ತದೆ. ಚಿಕ್ಕ ಮಕ್ಕಳಲ್ಲಿಯೂ ಹೀಗೆಯೇ. ಇಷ್ಟೇ ಅಲ್ಲ ಮೃಗ

ಪಕ್ಷಿಗಳಲ್ಲಿಯೂ ಇದುಂಟು; ಯಾವಹಾದರೂ ಒಂದು ಥಳ ಥಳಿಸುವ ಪದಾರ್ಥವನ್ನು ನೋಡಿದರೆ ಕಾಗೆಯು ಬಂದು ಕುಕ್ಕುತ್ತದೆ. ಇದಕ್ಕೆ ಪರಿಶೋಧಕತ್ವವೇ ಕಾರಣ.

ಹೊಸದಾಗಿ ರೈಲ್ವೆಯನ್ನು ಕಂಡ ರೈತರು ಮಾತನಾಡಿ ಕೊಂಡ ಕಥೆಯನ್ನು ಓದಿದ್ದೇವೆ, ಅದರಂತೆಯೇ ನಾವು ನಮ ಗೆ ತೋರಿಬಂದ ಸಲಕರಣೆ ಮುಂತಾದುವುಗಳನ್ನು ನಾವೇ ಊಹಿಸಿಕೊಳ್ಳುತ್ತೇವೆ. ಹಳದಿ ಕಮಲವನ್ನು ತಾವು ನೋ ಡಿದ್ದೀರೇನು ? ಕೆಲವರು "ಅದೆಲ್ಲಾದರೂ ಉಂಟೆ ?" ಎನ್ನಬಹುದು. ಆದರೆ ಬೆಂಗಳೂರಿನಲ್ಲಿ ಲಾಲ್‌ಬಾಗ್ ಸೂಪ ರಿಂಟೆಂಡೆಂಟರಾದ ಮಿ|| ಕ್ರುಂಬೀಗಲ್‌ರವರು ಇದನ್ನು ಹುಡು ಕಿ ತಂದು ಬೆಳೆಸಿದ್ದಾರೆ, ಇದಕ್ಕೆ ಅವರ ಹೆಸರೇ ಕೊಡಲಾ ಗಿದೆ. ತಾವು ಅದನ್ನು ನೋಡಬೇಕೆಂದು ಕುತೂಹಲವು ತಮ ಗಿಲ್ಲವೇ ? ಹಾಗೆಯೇ ಹಸುರು ಗುಲಾಬಿ ಹೂ ಸಹ.

ಇದ್ದಕಿದ್ದ ಹಾಗೆಯೇ "ಧಫ ಧಫ" ಶಬ್ದವಾಗುತ್ತ ದೆಂಬೋಣ; ಧೈರ್ಯಶಾಲಿಗಳು ಇದಕ್ಕೆ ಹೆದರದೆ ಅದೇ ನೆಂದು ನೋಡುವುದಕ್ಕೆ ಹೋಗುವರು ; ಧೈರ್ಯವಿಲ್ಲದಿದ್ದರೆ ಪರಿಶೋಧಕತ್ವದ ಬದಲು ಭಯವುಂಟಾಗಿ, ಮೈ ಕೈ ನಡುಗ ಲಾರಂಭಿಸಿ, ಏನು ಮಾಡುವುದಕ್ಕೂ ತೋಚದೆ ಇದ್ದೆಡೆಯೇ ಬಿದ್ದಿರಬೇಕಾದೀತು. ಮುದ್ರಾಮಂಜೂಷದಲ್ಲಿ ವರ್ಣಿಸಿರುವ ಬೋನಿನಲ್ಲಿರುವ ಸಿಂಹದ ತಂತ್ರವನ್ನು ತಿಳಿಯುವುದಕ್ಕೆ ಮುಂಚೆ ಒಂದೆಡೆ ಭಯವೂ ಮತ್ತೊಂದೆಡೆ ಪರಿಶೋಧಕ ತ್ವವೂ, ಇವೆರಡೂ ಉಂಟಾಗಿ, ಅದು 'ಕಣ್ಣು ಕಟ್ಟು' ಎಂಬ ಅಭಿಪ್ರಾಯವನ್ನು ನಮ್ಮಲ್ಲಿ ಹುಟ್ಟಿಸುತ್ತದೆ: ಪರಿ ಶೋಧಕತ್ವವೂ ಭಯವೂ ಎರಡೂ ಸೇರಿ ಒಮ್ಮೊಮ್ಮೆ ದಿಗ್ಭ್ರ ಮೆಯನ್ನುಂಟುಮಾಡಿ, ಅದು ಯಾವುದಾದರೂ ಒಂದರ 'ಮಹಿಮೆ' ಎನ್ನುವಂತೆ ನಮ್ಮಲ್ಲಿ ಒಂದು ವಿಚಿತ್ರವಾದ

ಭ್ರಮೆಯನ್ನುಂಟುಮಾಡುವುದನ್ನು ಎಷ್ಟೋಸಲ ಅನುಭವಿಸಿದ್ದೇನೆ.

ಪೂರ್ವಕಾಲದಲ್ಲಿ ಯೂರೋಪಿನಲ್ಲಿ, ಜನರಿಗೆ ದೇವರಲ್ಲಿ ಹೆಚ್ಚಾದ ಭಕ್ತಿಯನ್ನು ಹುಟ್ಟಿಸಬೇಕೆಂದೂ ಅಲ್ಲದೆ, ಮಠಗಳಿಗೆ ಸಾಕಾದಷ್ಟು ಗೌರವ ಬರಲೆಂದೂ ಜ್ವಾಲೆಯ ಅಕ್ಷರಗಳಿಂದ ದೇವತೆಗಳು ಆ ಮಠಗಳಮೇಲೆ ಬರೆಯುತ್ತಾರೆಂತ ಮಠಾಧಿಕಾರಿಗಳು ಸಾರುತ್ತಿದ್ದರು. ಅದರಂತೆಯೇ ಬರೆಯುತ್ತಿದ್ದರು. ಭಾಸ್ಪರಸ (Phosphorus)ವನ್ನು carbon-di-Sulphide ನಲ್ಲಿ ಹಾಕಿ, ಅದರಿಂದ ಬರೆದಲ್ಲಿ, ಕತ್ತಲಲ್ಲಿ ಜ್ವಾಲೆಯಿಂದ ಅಕ್ಷರಗಳನ್ನು ಬರೆದಂತೆ ಕಾಣುತ್ತವೆ. ಇದನ್ನು ತಿಳಿದ ಕ್ಷಣವೇ ಅದರಲ್ಲಿರುವ ಭಯವು ಮಾಯವಾಗಿ ಭಾಸ್ಪರದ ಗುಣಗಳನ್ನು ಪರಿಶೋಧಿಸಬೇಕೆಂಬ ಬುದ್ಧಿ ಹುಟ್ಟುತ್ತದೆ.

ಮಕ್ಕಳಿಗೆ ಪರಿಶೋಧಕತ್ವವು ಸ್ವಭಾವವಾದದ್ದು. ಒಂದು ಮಗು ತಾಯಿಯನ್ನು *"ನಾನು ಹುಟ್ಟುವುದಕ್ಕೆ ಮುಂಚೆ ಎಲ್ಲಿದ್ದೆ" ಎಂದು ಕೇಳಿತು. ತಾಯಿ ಏನನ್ನು ಹೇಳಬೇಕು ? "ಅದೆಲ್ಲಾ ಕೇಳಬಾರದು. ಮತ್ತೆ ಕೇಳಿದರೆ ಒದೆಯುತ್ತೇನೆ ನೋಡು" ಎಂದರೆ,—ಇದರಲ್ಲೇನೋ ಸ್ವಾರಸ್ಯವಿರಬೇಕು, ತಿಳಿದುಕೊಳ್ಳಲೇಬೇಕೆಂದು ಮಗುವು ಮತ್ತೊಬ್ಬರನ್ನು ಕೇಳಬಹುದು. ಅವರೂ ಹೇಳದಿದ್ದರೆ ಅಲ್ಲದೆ ಬೈದರೆ, ಇದೇನೋ ಯಾರಿಗೂ ತಿಳಿಯಬಾರದ ಸಂಗತಿ, ಇದನ್ನು ಗೋಪ್ಯವಾಗಿ ತಿಳಿದುಕೊಳ್ಳಬೇಕೆಂದು ತನ್ನ ಸ್ನೇಹಿತರೊಡನೆ ಕೆಲವು ವರ್ಷಗಳಾದ ಅನಂತರ ಕೇಳಿ, ತಪ್ಪು ಅಭಿಪ್ರಾಯಗಳನ್ನು ತಿಳಿದುಕೊಳ್ಳಬಹುದು.

---

* Educational Psychology-Fox.

Mark how the infant sitting on

ಮಕ್ಕಳು ಕೇಳಿದುದಕ್ಕೆಲ್ಲಾ, ತಾಯಿಯು ಉತ್ತರ ಕೊಡುವುದು ಬಹಳ ಪ್ರಯಾಸವೇ ಸರಿ. ನನ್ನ ಮಗನಿಗೆ ನಾಲ್ಕು ವರ್ಷ; ಒಬ್ಬನು ಒಂದು ಕರಡಿಯನ್ನು ತಂದು, ನಮ್ಮ ಮನೆಯ ಮುಂದೆ ಆಡಿಸಿದನು. ಅದನ್ನು ಮುಟ್ಟಬೇಕೆಂದಾಶೆ, ಮುಟ್ಟುವುದಕ್ಕೆ ಹೆದರಿಕೆ. ಮನೆಯಲ್ಲಿ ಹೆಂಗಸರು ಮುಟ್ಟಬೇಡವೆಂದರೆ ಅವನಿಗೆ ಹೆದರಿಕೆ ಮತ್ತಷ್ಟಾಗುವುದಿಲ್ಲವೆ? ಅವನು ಆಡಿಸಿ ಹೊರಟುಹೋದಮೇಲೆ ಮಗುವು " ಅಪ್ಪ, ಕರಡಿಗೂ ಬಾಲ ಇದೆಯೆ ? " ಎಂದನು.

" ಇದೆಯಪ್ಪ "

" ಯಾಕೆ ಕಾಣೋದಿಲ್ಲ ? "

" ಕೂದಲು ಹೆಚ್ಚಾಗಿದೆಯಪ್ಪ "

---

your knee thrusts into your face the toy it holds, that you may look at it. See when it makes a creak with its wet finger on the table, how it turns and looks at you; does it again and again look at you; this saying as clearly as it can — " Hear this new sound " Watch the elder children coming into the room exclaiming— "Mamma, see what a curious thing." "Mamma, look at this," "Mamma look at that" a habit which they would continue, did not the silly mamma tell them not to tease her"

Spencer - Intellectual Education.

"ನಮಗೇಕಿಲ್ಲ ?"

"ನಮಗೂ ಬರುತ್ತೆ, ಆದರೆ ಅಷ್ಟು ಹೆಚ್ಚಾಗಿ ಬೆಳೆಯೋದಿಲ್ಲ".

"ಅದೇಕೆ ?"

ನನಗೆ ಏನು ಹೇಳುವುದಕ್ಕೂ ತೋಚದೆ "ನಾವು ಮನುಷ್ಯರು, ಅದು ಕರಡಿ" ಎಂದೆ. "ಅದೇತಕ್ಕೆ ಹೀಗಾಗುತ್ತೆ ? ಅದೇನು ? ಅದೇಕೆ ?" ಈ ರೀತಿಯಾಗಿ ಮಕ್ಕಳು ಪ್ರಶ್ನೆ ಹಾಕುವುದು ಅವರಿಗೆ ಸ್ವಭಾವವಾಗಿದೆ. ಆದರೆ ಅದನ್ನು ನಾವು ತಿಳಿಯದೆ, ಅವರು ಕೇಳುವುದು ತಪ್ಪೆಂಬ ಅಭಿಪ್ರಾಯದಿಂದ ನಾವು ಹೇಳಿದ್ದನ್ನು ಕೇಳಿಕೊಂಡಿರಬೇಕೇ ಹೊರತು, ಅವರಾಗಿ ಕೇಳಕೂಡದೆಂದು, ಅವರನ್ನು ಬೈದು, ಹೊಡೆಯುತ್ತೇವೆ. ಅವರಿಗೆ ಶಾಸ್ತ್ರೋಕ್ತವಾಗಿ ಉತ್ತರ ಕೊಡಬೇಕೆಂದಿಲ್ಲ; ಅವರಿಗೆ ತಪ್ಪು ಅಭಿಪ್ರಾಯಗಳು ಬರದ ಹಾಗೆ ಕೊಡಬೇಕು, ಇದು ಸುಲಭವಾದ ಕೆಲಸವಲ್ಲ. ಇದೆಷ್ಟರ ಮಟ್ಟಿಗೆ ಸಾಧ್ಯವೆಂಬುದನ್ನು ತಿಳಿಯಬೇಕಾದರೆ, ಒಂದು ಮಗುವನ್ನು ಒಂದು ತೋಟಕ್ಕಾಗಲಿ, ಮತ್ತೆಲ್ಲಿಯಾದರೂ ಆಗಲಿ, ಕರೆದುಕೊಂಡು ಹೋದರೆ ಗೊತ್ತಾಗುವುದು. "ಈ ಹೂವು ಏತಕ್ಕೆ ಕೆಂಪಗಿದೆ ?" "ಆಲದ ಮರ ಏತಕ್ಕಾಗಿ ದೊಡ್ಡದಾಗಿ ಬೆಳೆಯುತ್ತೆ, ಬಾಳೆಗಿಡ ಬೆಳೆಯೋದಿಲ್ಲ ?" ಇಂತಹ ಸಾವಿರಾರು ಪ್ರಶ್ನೆಗಳಿಗೆ ಸಮಂಜಸವಾದ ಉತ್ತರಗಳನ್ನು ಕೊಡುವವರಾರು ? ಏನಾದರೂ ನೋಡುವುದಕ್ಕೆ ನಿಂತರೆ ಪೂರ್ತಿಯಾಗಿ ನೋಡಬೇಕು. ದೊಡ್ಡವರು ಮಾಡುತ್ತಿರುವುದೆಲ್ಲವನ್ನೂ ನೋಡುತ್ತಾ, ಮಕ್ಕಳು "ಇವರು ಹೀಗೇಕೆ ಮಾಡುತ್ತಾರೆ ?" ಎಂದುಕೊಳ್ಳುತ್ತಾ ಇರುತ್ತಾರೆ. ಅವರಿಗೆ ಅವುಗಳ ವಿಚಾರವಾಗಿ ಸರಿಯಾದ ಅಭಿಪ್ರಾಯಗಳನ್ನು ಕೊಡುವುದು ನಮ್ಮ ಕರ್ತವ್ಯ.

ಎಳೇ ಮಗುವಿನಿಂದ ಮೊದಲು ಮೃಗಗಳ ವರೆಗೂ, ಎಲ್ಲಾ ಜೀವಿಗಳಿಗೂ, ಇದು ನೈಜವಾದದ್ದಲ್ಲದೆ, ಅನೇಕ ವೇಳೆ, ಇದರೊಡನೆ ಬೇರೆಬೇರೆ ನೈಸರ್ಗಿಕ ಬೋಧೆಗಳೂ ಬರುವುದುಂಟು. ಇದನ್ನು ತಿಳಿಯಪಡಿಸಲೋಸುಗ ಪ್ರೊಫೆಸರ್ ಎಂ. ವಿ. ಗೋಪಾಲಸ್ವಾಮಿಯವರು, ಮೈಸೂರಿನಲ್ಲಿ ಮಾಡಿರುವ ಪ್ರಯೋಗಗಳ ಪೈಕಿ ಕೆಲವನ್ನು ಇಲ್ಲಿ ಕೊಡಲಾಗಿದೆ.

I ಹದಿನೆಂಟು ತಿಂಗಳ ಶಿಶುವನ್ನು ತಾಯಿಯು ಎತ್ತಿಕೊಂಡಿರಲು, ಆದರ ಹತ್ತಿರ ಬಂದು, 'ಭೂ' ಎನ್ನುವುದು.

(ಅ) ಮೆಲ್ಲನೆ 'ಭೂ' ಎಂದಾಗ(ಹತ್ತಿರಕ್ಕೆ ಬಾರದಿದ್ದರೆ)- ಶಿಶುವು ತನ್ನ ತಲೆಯನ್ನು ಮುಂದಕ್ಕಿಟ್ಟು ಕೈಗಳನ್ನು ಮುಂದಕ್ಕೆ ಚಾಚಿತು. (ಪರಿಶೋಧಕತ್ವ)

(ಇ) ಇನ್ನು ಸ್ವಲ್ಪ ಗಟ್ಟಿಯಾಗಿ 'ಭೂ' ಎಂದು, ಹತ್ತಿರಕ್ಕೆ ಬಂದಾಗ, ಕೊಂಚ ಹಿಂದಕ್ಕೆ ಸರಿಯಿತು. ಇದ್ದಾಗ್ಯೂ ಅದೇನೆಂದು ತಿಳಿಯಲು ಕುತೂಹಲವನ್ನು ತೋರಿತು. ಕ್ರಮೇಣ ನಗುವೂ ತೋರಿಬಂತು. [ಭಯ ಮತ್ತು ನಗು]

(ಉ) ಬಹಳ ಗಟ್ಟಿಯಾಗಿ 'ಭೂ' ಎಂದು, ಹಟಾತ್ತಾಗಿ ಹತ್ತಿರಕ್ಕೆ ಬಂದಾಗ, ಶಿಶುವು ಮುಖವನ್ನು ಆಚೆ ಕಡೆ ತಿರುಗಿಸಿ, ತಾಯಿಯನ್ನು ಭದ್ರವಾಗಿ ಹಿಡಿದುಕೊಂಡಿತು. [ಭಯ] ಪುನಃ ಇದೇ ರೀತಿ ಮಾಡಲು ಅಳಲಾರಂಭಿಸಿತು.

(Phychological Studies — July 1926. p. 23)

III ಕೋತಿಗಳಲ್ಲಿಯೂ ಸಹ ಇದರ ಮಹತ್ವವನ್ನು ತಿಳಿಯಲು ಮತ್ತು ತೋರಿಸಲು ಮಾಡಿದ ಪ್ರಯೋಗಗಳು. [The Psychogalvanic Phenomenon in Monkeys]

(ಕ) ಇರುವೆಯನ್ನು ತೋರಿಸಿದುದಕ್ಕೆ-ತಳ್ಳಲು ಪ್ರಯತ್ನ [ಭಯ]

(ಖ) ಕೋತಿಯ ಕಿವಿಯನ್ನು ಇರುವೆ ಕಚ್ಚಿದಮೇಲೆ, ಇರುವೆಯನ್ನು ತೋರಿಸಿದ್ದಕ್ಕೆ – ಸುಮ್ಮನೆ ಕೂತಿರುವುದು; ಇರುವೆ ಓಡಾಟವನ್ನು ದೃಷ್ಟಿಸುತ್ತಿರುವುದು [ಭಯ – ಪರಿಶೋಧಕತ್ವ]

(ಗ) ಬೆಂಕಿ ಕಡ್ಡಿಯನ್ನು ಗೀಚಿ ಕೋತಿಯ ಮೂತಿಯ ಹತ್ತಿರ ಹಿಡಿಯುವುದು.

ಮೊದಲನೆಯ ಸಲ—ವಾಸನೆ ನೋಡಿತು. ತುಟಿಗಳನ್ನು ಸುಟ್ಟಿಕೊಂಡಿತು. [ಪರಿಶೋಧಕತ್ವ]

ಎರಡನೆಯ ಸಲ—ಬೆರಳುಗಳಿಂದ ಮುಟ್ಟಿ ಸುಟ್ಟುಕೊಂಡಿತು [ಪರಿಶೋಧಕತ್ವ]

ಮೂರನೆಯ ಸಲ—ಹತ್ತಿರಕ್ಕೆ ಬರಲಿಲ್ಲ. ತುಟಿಗಳನ್ನು ಮರೆಸಿಕೊಂಡಿತು. ಸುಟ್ಟಿದ್ದು ಜ್ಞಾಪಕಕ್ಕೆ ಬಂತೋ ಏನೋ [ಭಯ – ಪರಿಶೋಧಕತ್ವ]

ನಾಲ್ಕನೆಯ ಸಲ—ನಿಧಾನವಾಗಿ ಕೈಗಳನ್ನು ಚಾಚಿ ಜ್ವಾಲೆಯನ್ನು ಮುಟ್ಟಿತು [ಪರಿಶೋಧಕತ್ವ – ಭಯ] ಮೂರನೆಯದರಲ್ಲಿ ಭಯವೇ ಪ್ರಾಧಾನ್ಯ; ನಾಲ್ಕನೆಯ ಸಲ ಪರಿಶೋಧಕತ್ವವೇ ಪ್ರಾಧಾನ್ಯ.

ಐದನೆಯ ಸಲ—ಮೂತಿಯನ್ನು ಆಚೆಕಡೆ ತಿರುಗಿಸಿತು. ನೋಡಲೂ ಕೂಡ ಇಲ್ಲ. [ಭಯ]

ಆರನೆಯ ಸಲ—ಕಡ್ಡಿಯನ್ನು ಹಿಡಿದಿರುವವನ ಕೈಯನ್ನೇ
ತಳ್ಳಿ ಬಿಟ್ಟಿತು. [ಭಯ - ಕೋಪ]

III ಒಂದು ಬದುಕಿರುವ ಮಿಡತೆಯನ್ನು ಗಾಜಿನ ಪಾತ್ರೆ
ಯೊಳಗಿಟ್ಟು, ಕೋತಿಗೆ ತೋರಿಸಿದ್ದು—ಅದನ್ನೇ ನೋಡುತ್ತಾ
ಗಾಜಿನ ಪಾತ್ರೆಯನ್ನು ತಳ್ಳಲು ಪ್ರಯತ್ನ. [ಪರಿಶೋಧಕತ್ವ]

(ಣ) ಮೇಣದ ಬತ್ತಿಯನ್ನು ಹಚ್ಚಿ, ಕೋತಿಯು ನೋ
ಡುತ್ತಿದ್ದಂತೆಯೇ ಮೂರುಸಲ ಅದರ ಜ್ವಾಲೆಯ
ನ್ನು ಮುಟ್ಟುವುದು.

ಕೋತಿಯು ಸ್ವಲ್ಪ ಹಿಂಜರಿಯಿತು. ಆಮೇಲೆ
ಮೇಣದ ಬತ್ತಿಯನ್ನು ಮುಟ್ಟಿತು. ಮೆಲ್ಲನೆ ಬೆರಳು
ಗಳನ್ನು ಜ್ವಾಲೆಯ ಕಡೆಗೆ ನಡಿಸುತ್ತಾ ಬಂತು
[ಭಯ - ಪರಿಶೋಧಕತ್ವ] ಸರ,ನೆ ಮುಟ್ಟಿ ಹಿಂದ
ಕ್ಕೆ ಕಿತ್ತು ತೆಗೆಯಿತು [ಪರಿಶೋಧಕತ್ವ - ಭಯ]
ಪುನಃ ಇನ್ನೊಂದು ಕೈಯಿಂದ ಜ್ವಾಲೆಯನ್ನು ಮು
ಟ್ಟಿತು.

IV (ತ) 'ಬೊಂಬೆ' ಪಿಸ್ತೂಲು ತೋರಿಸಲು, ಕೋತಿ
ಯು ಅದರ ಕಡೆ ಕ್ಷಣಮಾತ್ರ ನೋಡಿ, ಮೂ
ತಿಯನ್ನು ಆಚೆ ತಿರುಗಿಸಿತು. [ಒಂದು ಕ್ಷಣದ
ಮಟ್ಟಿಗೆ ಪರಿಶೋಧಕತ್ವ]

(ಥ) ಪಿಸ್ತೂಲು ಹಾರಿಸಲು - ಸ್ವಲ್ಪ ನಡುಗಿತು [ಭಯ]

(ದ) ಮತ್ತೆ ಹಾರಿಸಲು – ಮೈ ಕೈ ನಡುಗಿದ್ದಲ್ಲದೆ, ಕೋ
ತಿಯು ಬೇರೆ ಕಡೆಗೆ ತಿರುಗಿತು [ಭಯ]

(ಧ) ಸುಮ್ಮನೆ ಹಾರಿಸಲು-ಪಿಸ್ತೂಲು ಶಬ್ದವಿಲ್ಲದಿದ್ದರೂ
ಭಯವನ್ನು ತೋರಿತು.

V (ಟ) ಕನ್ನಡಿ ತೋರಿಸಿದರೆ - ಪ್ರತಿಬಿಂಬವನ್ನು ಅಣಕಿಸುತ್ತ. ಆದನ್ನು ಹಿಡಿಯಲು ಪ್ರಯತ್ನ [ಪರಿಶೋಧಕತ್ವ]

(ಠ) 'ಭೂತ'ಕನ್ನಡಿ ತೋರಿಸಲು - ಸ್ವಲ್ಪ ಹಿಂದಕ್ಕೆ ಸರಿದು, ಓಡುವುದಕ್ಕೂ, ಆದರೊಡನೆ ಹೊಡೆದಾಡುವುದಕ್ಕೂ ಅಣಿಮಾಡಿಕೊಂಡಿತು. [ಭಯ-ಕೋಪ]

VI ಇಷ್ಟು ಹೊತ್ತಿಗೆ ಕೋತಿಗೆ ಸ್ವಲ್ಪ ನಿದ್ದೆ ಬಂದ ಹಾಗಾಯಿತು. ಎದೆಯನ್ನು ಒತ್ತಿ ಮೆಲ್ಲನೆ ಎಚ್ಚಸಲು, ಭಯದಿಂದ ಕೂಗಿಕೊಂಡಿದ್ದಲ್ಲದೆ, ಮೈ ಕೈಯನ್ನು [ಪರಿತಾಪದಿಂದ] ಸುತ್ತಿಕೊಳ್ಳಲಾರಂಭಿಸಿತು.

Phychological Studies — July [1226 p. 51]

ಪಾಶ್ಚಿಮಾತ್ಯರಿಗೂ ನಮ್ಮವರಿಗೂ ಈ ವಿಚಾರದಲ್ಲಿ ಬಹಳ ಹೆಚ್ಚು ಕಡಿಮೆ. ಹುಡುಗನು ಹೆಚ್ಚು ಪ್ರಶ್ನೆಗಳನ್ನು ಕೇಳಿದರೆ ಅವರು ಸಂತೋಷಪಡುತ್ತಾರೆ; ಅವನಿಗೆ ವಿಷಯಗಳನ್ನು ತಿಳಿದುಕೊಳ್ಳುವುದರಲ್ಲಿ ಆಸಕ್ತಿ ಹೆಚ್ಚು ಮಾಡಬೇಕೆಂಬುದೇ ಉದ್ದೇಶ. ನಮ್ಮಲ್ಲಾದರೋ "ಶುದ್ಧ ತಲೆಹರಟೆ. ಹೇಳಿದಷ್ಟು ಕೇಳದೆ, ಸುಮ್ಮನೆ ಸಿಕ್ಕಿದ ಹಾಗೆ ಕೇಳುತ್ತೀಯಲ್ಲೋ" ಎಂದು ಪುನಃ ಹುಡುಗನು ಉಸಿರೆತ್ತದಂತೆ ಮಾಡುತ್ತೇವೆ. ಅಲ್ಲದೆ ಬಹಳ ಕಡೆ ನಮ್ಮಲ್ಲಿ ಸರಿಯಾದ ಸಲಕರಣೆಗಳೂ ಇಲ್ಲ. ಆದುದರಿಂದ ಹುಡುಗನಲ್ಲಿರುವ ಪರಿಶೋಧಕತ್ವವನ್ನು ಬಹಳ ಸಂದರ್ಭಗಳಲ್ಲಿ ತುಳಿದಂತಾಗುತ್ತದೆ; ಮತ್ತೆ ಕೆಲವು ಸಂದರ್ಭಗಳಲ್ಲಿ ವ್ಯಂಗ್ಯವಾಗುತ್ತದೆ.*

---

*In adult life the chief result of the stunting or dwarfing of the curiosity

ವಿಜ್ಞಾನವನ್ನು ಕಲಿಸುವುದಕ್ಕಾಗಲಿ ಕಲಿಯುವುದಕ್ಕಾಗಲಿ ಈ ಪರಿಶೋಧಕತ್ವವೇ ಮೂಲ. ಇದಿಲ್ಲದಿದ್ದಲ್ಲಿ ಯಾವುದನ್ನೂ ಕಲಿಯಲು ಸಾಧ್ಯವಿಲ್ಲ. ವಿಜ್ಞಾನದಲ್ಲಿ ಅಭಿರುಚಿ ಹುಟ್ಟಬೇಕಾದರೆ, ಹಿಂದೆ ಅವುಗಳ ತತ್ವಗಳನ್ನು ಕಂಡುಹಿಡಿದ ಶಾಸ್ತ್ರಕಾರರು ಏನೇನು ಮಾಡಿದರೋ, ಅವನ್ನೆಲ್ಲಾ ಹುಡುಗನು ಮಾಡಬೇಕು; ಹೇಗೆ ಹೇಗೆ ತರ್ಕಿಸಿದರೋ, ಊಹಿಸಿದರೋ, ಹಾಗೆಯೇ ಇವನೂ ಮಾಡಿ ಕಲಿಯಬೇಕೆಂಬುದು ಈಗಿನ ಮತ.

ರಸಾಯನ ಶಾಸ್ತ್ರವನ್ನು ತೆಗೆದುಕೊಳ್ಳೋಣ. ಎರಡು ವಸ್ತುಗಳನ್ನು ಸೇರಿಸಿದರೆ ಏನಾಗುತ್ತದೆಂದು ಆ ಹುಡುಗನು ತಿಳಿಯಬೇಕೆಂದಿದ್ದರೆ, ಏನಾದರೆ ನಮಗೇನು. ಇದನ್ನು ಕೇಳಿದರೆ ಇಲ್ಲದ ಬೈಗಳನ್ನು ತಿನ್ನಬೇಕಾಗುವುದು—ಆದುದರಿಂದ ನಮಗೇ ತಂಟೆಯೇ ಬೇಡೆಂಬ ಹುಡುಗರೂ, ಇನ್ನೆಷ್ಟು ಮಟ್ಟಿಗೆ ರಸಾಯನ ಶಾಸ್ತ್ರದ ಅಭಿರುಚಿಯನ್ನೊಳಕೊಂಡಿರುವರೋ ನೀವೇ ಊಹಿಸಬೇಕು.

ನ್ಯೂಟನ್ನ (Newton) ನು ಒಂದು ಸೇಬಿನ ಹಣ್ಣು ಬಿದ್ದುದನ್ನು ನೋಡಿ, ಇದೇತಕ್ಕೆ ಬಿತ್ತೆಂದು ಯೋಚಿಸತೊಡಗಿ, ಇದರಿಂದ ಭೂಮಿಯು ಮಿಕ್ಕ ಪದಾರ್ಥಗಳನ್ನೆಲ್ಲಾ ಆಕರ್ಷಿಸುತ್ತದೆ. ಇದೇ ಪದಾರ್ಥಗಳ ಭಾರಕ್ಕೆ ಕಾರಣವೆಂದು ನಿಶ್ಚಯಿಸಿದನು. ನಾವಾದರೋ ಯಾರಾದರೂ ಸತ್ತರೂ ಕೂಡ "ಏನಪ್ಪ, ಎಷ್ಟಿದ್ದರೂ ಒಂದು ದಿನ ಸಾಯಬೇಕು—" ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಾ " ಮಾಂ

---

impulse, which is too frequently produced by our system of Education, is ennui and lack of interest in life

The Direction of Desire-Bligh.

ಘಾತಕಾಚ ಮಹೀಪತಿ:—" ಎಂದು ಹಾಡುತ್ತಾ, ಈ ಪ್ರಪಂಚವೆಲ್ಲವೂ ಮಾಯೆಯೆಂದು ಆ ಹೊತ್ತಿನ ಮಟ್ಟಿಗೆ ತಿಳಿವಳಿಕೆ ಹುಟ್ಟಿತೆಂದಂದುಕೊಳ್ಳುತ್ತೇವೆ. ಎಲ್ಲಾದರೂ ಒಂದು ವಿಚಿತ್ರವನ್ನು ಕಂಡರೆ ಅದೇನೆಂದು ತಿಳಿದುಕೊಳ್ಳಲು ಎಷ್ಟು ಸಲ ಪ್ರಯತ್ನಪಟ್ಟಿದ್ದೇವೆ ? 'ಮುಟ್ಟಿದರೆ ಮುನಿ'ಯನ್ನು ನೋಡದೇ ಇದ್ದವರೇ ಇಲ್ಲ. ಮುಟ್ಟಿದ್ದೇವೆ ಅದರೊಡನೆ ಆಟವಾಡಿದ್ದೇವೆ. ಅದೇತಕ್ಕೆ ಹಾಗೆ ಮಾಡುತ್ತದೆಂದು ಯೋಚಿಸಿದ್ದೇವೆಯೆ ?

ಪರಿಶೋಧಕತ್ವವು ವ್ಯಂಗ್ಯವಾದರೆ ಅದು ನಮಗೆ ಸಹಾಯ ಮಾಡುವುದಕ್ಕೆ ಬದಲಾಗಿ ತೊಂದರೆಯನ್ನೇ ಉಂಟುಮಾಡುತ್ತದೆ. ಪಕ್ಕದ ಮನೆ ರಾಮರಾಯನೇನು ಮಾಡುತ್ತಿದ್ದಾನೆಂತಲೂ, ಅಕ್ಕಪಕ್ಕದಲ್ಲಿರುವ ಹುಡುಗರನ್ನು ಜಿಗುಟಿದನೆ ಏನಾಗುತ್ತೋ ನೋಡೋಣವೆಂತಲೂ, ಬುದ್ಧಿ ಹುಟ್ಟುತ್ತದೆ. ಮನೆಯಲ್ಲಿ ಕೆಲಸವಿಲ್ಲದ ಹೆಂಗಸರೆಲ್ಲರೂ ಕೂತು ಗೊಡ್ಡು ಹರಟೆ ಹೊಡೆಯುತ್ತಾ, ಅವರಿವರ ಸಮಾಚಾರವನ್ನು ಪ್ರಕಟಿಸುವುದಕ್ಕೆ ಇದೇ ಮೂಲ.

ನಮಗೆ ಉಪಯೋಗವೆಂದು ತಿಳಿದು ಬರುವ ವಿಚಾರಗಳಲ್ಲಿ ಎಲ್ಲರಿಗೂ ತಿಳಿದುಕೊಳ್ಳಬೇಕೆಂಬ ಆಸಕ್ತಿಯಿರುತ್ತದೆ. ಆಗ ನಿಜವಾಗಿಯೂ ಅವರವರ ಪರಿಶೋಧಕತ್ವವು ಅವುಗಳ ವಿಚಾರವನ್ನು ಚೆನ್ನಾಗಿ ತಿಳಿದುಕೊಳ್ಳಬೇಕೆಂದು ಪ್ರೇರೇಪಿಸುತ್ತದೆ. ಆದುದರಿಂದ ಈ ಪರಿಶೋಧಕತ್ವದ ಮೂಲಕ ಹುಡುಗ ಮನಸ್ಸನ್ನು ಆ ವಸ್ತುಗಳ ಕಡೆ ಎಳೆಯಬೇಕಾದರೆ, ಅವುಗಳಿಂದಾಗುವ ಉಪಯೋಗಗಳನ್ನು ಹುಡುಗರಿಗೆ ತಿಳಿಸಬೇಕು. ಇದನ್ನು ತಿಳಿಸುವಾಗ, ಉಪಾಧ್ಯಾಯನು ಅಲ್ಲಲ್ಲಿ ಅವರಿಗೆ ತಿಳಿಯದ ವಿಷಯಗಳನ್ನು ಕಥೆಯಂತೆ ಹೇಳಿದರೆ " ಮುಂದೇನಾಗುತ್ತೋ ? " ಅಥವಾ " ಹಾಗೇನು—ಇನ್ನೂ ಸ್ವಾರಸ್ಯವಿಥ

ಬೇಕು" ಎಂದು ಕೇಳುವವರಿಗೆ ತೋರಿ. ಒಂದೇ ಮನಸ್ಸಿನಿಂದ ಆತನು ಹೇಳುವುದನ್ನು ಹುಡುಗರು ಕೇಳುವರು, ಇದರಿಂದ ಅವರ ಮನಸ್ಸಿಗೂ ಚನ್ನಾಗಿ ಹಿಡಿಯುವುದು.

ನಮ್ಮ ಮನೆಯಲ್ಲಿ ಒಂದು ಶುಭ ಕಾರ್ಯ ನಡೆಯಬೇಕಾಗಿತ್ತು; ಆಗ ನಾವು ತಂತಿ ಕೊಡಬೇಕೆಂದು ಮಾತನಾಡಿಕೊಳ್ಳುತ್ತಿದ್ದೆವು. ನಮ್ಮ ಹುಡುಗ ಅದನ್ನು ಕೇಳುತ್ತಿದ್ದ. ಅಲ್ಲಿ ಇಲ್ಲಿ ಹುಡುಕಿ, ಒಂದು ತಂತಿ ಸಿಕ್ಕ ಕೂಡಲೇ "ಅಪ್ಪ, ಸಿಕ್ಕಿತು, ಸಿಕ್ಕಿತು" ಎಂದು ಕೂಗುವುದಕ್ಕೆ ಮೊದಲು ಮಾಡಿದನು. ಏನೆಂದು ಕೇಳಲಾಗಿ "ಇಗೋ ತಂತಿ ಕೊಟ್ಟು ಬಿಡಪ್ಪ" ಎಂದು ಹೇಳಿ ಆ ತಂತಿಯನ್ನು ನನ್ನ ಕೈಯಲ್ಲಿಟ್ಟನು.

"ಹೀಗಲ್ಲಪ್ಪ ತಂತಿ ಕೊಡೋದು"

"ಇನ್ನು ಹೇಗೆ?"

"ಹೇಳ್ತೇನೆ ಇನ್ನೊಂದು ದಿನ; ನಿನ್ನ ಕರೆದುಕೊಂಡು ಹೋಗಿ ತೋರಿಸುತ್ತೇನೆ"

ಹೀಗೆ ಮಾತನಾಡುತ್ತಿದ್ದಾಗ ಅಂಚೆಯವನು ಒಂದು ಕಾಗದವನ್ನು ತಂದು ಕೊಟ್ಟನು.

"ಅಪ್ಪ ಎಲ್ಲೀದಪ್ಪ?"

"ಬೆಂಗಳೂರಿಂದ"

"ಅದು ಹೇಗೆ ಬಂತು—ಅವನು ಬೆಂಗಳೂರಿಂದ ಬಂದನೇ?"

ಇದರ ವಿಚಾರವನ್ನು ಆ ಮಗುವಿಗೆ ತಿಳಿಸಲು ಬಹಳ ಕಷ್ಟವಾಯಿತು. ಪ್ರತಿ ಒಂದಕ್ಕೂ 'ಅದು ಹೇಗೆ?' ಎಂದು ಕೇಳಿದರೆ ಎಲ್ಲಿಗೆ ಕೊನೆ?

ಪರಿಶೋಧಕತ್ವವನ್ನು ಸರಿಯಾದ ಮಾರ್ಗಕ್ಕೆ ತಿರುಗಿಸಲು ಸಾಕಾದಷ್ಟಿದೆ. ಹೇಗೆಂದರೆ ಸ್ಟ್ಯಾಂಪು ಎಂಬುದನ್ನು ಹೇಳ

ವಾಗ, ಬೇರೆ ಬೇರೆ ದೇಶಗಳಲ್ಲಿರುವ ಬೇರೆ ಬೇರೆ ವಿಧವಾದ ಅಂಚೆಯ ಚೀಟಿಗಳ ವಿಚಾರ ಹೇಳಬಹುದು. ಆಯಾ ದೇಶಗಳ ವಿಚಾರ ಇನ್ನೂ ಸ್ವಲ್ಪ ಹೆಚ್ಚಾಗಿ ತಿಳಿದುಕೊಳ್ಳಬೇಕೆಂಬ ಕುತೂಹಲವು ಮಕ್ಕಳಿಗೆ ಹುಟ್ಟುತ್ತದೆ. ಅಲ್ಲದೆ ಕಾಗದವು ಒಂದೂರನ್ನು ಬಿಟ್ಟು ಮತ್ತೊಂದೂರನ್ನು ಸೇರುವವರೆಗೂ ಅದಕ್ಕಾಗುವ ಸಂಸ್ಕಾರಗಳನ್ನು ಹೇಳಿದರೆ, ಬೇರೆ ಬೇರೆ ದೇಶಗಳಿಗೆ ಜನರು ಹೇಗೆ ಹೋಗುತ್ತಾರೆಂಬುದು ತಿಳಿಯಬೇಕೆನಿಸುತ್ತದೆ. ಹೀಗೆಯೇ ಪ್ರತಿ ಒಂದು ವಿಚಾರದಲ್ಲಿಯೂ, ಬೇರೆ ಬೇರೆ ವಿಷಯಗಳ ಕಡೆ ಮನಸ್ಸನ್ನು ತಿರುಗಿಸಲು ಈ ಪರಿಶೋಧಕತ್ವವೇ ಕಾರಣವಾಗುತ್ತದೆ.

ಈ ಪರಿಶೋಧಕತ್ವವನ್ನು ಸರಿಯಾದ ಮಾರ್ಗದಲ್ಲಿ ನಡೆಸಬೇಕಾದರೆ, ತಾವು ಹೇಳುವ ಪ್ರತಿ ವಿಚಾರವನ್ನೂ ಸರಿಯಾದ ಸಂಗಡದಲ್ಲಿ ವಿಂಗಡಿಸಿಕೊಂಡಿರಬೇಕು; ಶಾಸ್ತ್ರೋಕ್ತವಾಗಿ ಹೇಳಬೇಕು. ಹೀಗೆ ಪ್ರತಿ ಒಂದನ್ನೂ ಶಾಸ್ತ್ರೋಕ್ತವಾಗಿ ತಿಳಿಯಬೇಕೆಂಬ ಕುತೂಹಲವನ್ನು ವ್ಯಕ್ತಿಯಲ್ಲಿ ಹುಟ್ಟಿಸಿದ್ದೇ ಆದರೆ ಅದಕ್ಕಿಂತಲೂ ಹೆಚ್ಚಾದ ಉಪಕಾರವನ್ನು ಆ ವ್ಯಕ್ತಿಗೆ ಮಾಡಲಾದೀತೆ? ವಿದ್ಯೆಗಿಂತಲೂ ಅತಿಶಯವಾದುದು ಮತ್ತೊಂದಿಲ್ಲ; ಇಂತಹ ವಿದ್ಯೆಯನ್ನು ವ್ಯಕ್ತಿಗೆ ಕೊಡಬೇಕಾದರೆ ಈ ಪರಿಶೋಧಕತ್ವದಿಂದಲೇ. ಆದುದರಿಂದ ಕಾಡಿನಲ್ಲಿ ಬೆಳೆಯುವ ಗಿಡಗಳಂತೆ, ಹದ್ದುಬದ್ದಿಲ್ಲದೆ ಬೆಳೆಸುವುದಾಗಲಿ ಅಥವಾ ಮರುಭೂಮಿಯಲ್ಲಿ ಗಿಡಗಳು ನಶಿಸಿಹೋಗುವಂತೆ ಅದನ್ನು ಬುಡ ಮುಟ್ಟ ಕಿತ್ತುಹಾಕುವುದಾಗಲಿ ಮಾಡದೆ, ರಮ್ಯವಾದ ಉದ್ಯಾನದಲ್ಲಿ ಗಿಡಗಳನ್ನು ಕತ್ತರಿಸಿ, ಅಂದವಾಗಿ ಕಾಣುವ ಹಾಗೆ ಬೆಳೆಸುವಂತೆ, ಈ ಪರಿಶೋಧಕತ್ವವನ್ನು ಸರಿಯಾದ ಮಾರ್ಗದಲ್ಲಿ ಬೆಳೆಸಿದರೆ. ವ್ಯಕ್ತಿಗೂ ಅಲ್ಲದೆ ಸಮಷ್ಟಿಗೂ ಉಪಕಾರ ಮಾಡಿದಂತೆಯೇ ಸರಿ.

---

# ವಿಷಯಾಸಕ್ತಿ

ವಸಂತಋತು, ರಮಣೀಯವಾದ ಉದ್ಯಾನವನ, ವೃಕ್ಷಲತೆಗಳು ಫಲಪುಷ್ಪಗಳಿಂದ ತುಂಬಿ ನಗುತ್ತಿವೆ. 'ರಮಣಿ, ನಿನ್ನ ತುಟಿಯ ಗೆಂಪನ್ನು ಅಣಕಿಸುತ್ತಿರುವ ಆ ದಾಳಿಂಬೆ ಹೂವನ್ನು ನೋಡು. ನಿನಗಾಗಿಯೇ ಸೂರ್ಯನು ತನ್ನ ಕಿರಣಗಳನ್ನು ಹರಡುತ್ತಿರುವನು; ಲತೆಗಳು ಫಲಭರಿತವಾಗಿಹವು. ರಮಣಿ, ನನ್ನನ್ನು ನೋಡಿದರೂ, ನೋಡದಂತೇತಕ್ಕಿರುವೆ?' ಎನ್ನುತ್ತ ಗಂಡು ಪಾರಿವಾಳವು, ಹೆಣ್ಣಿಗೆ ತನ್ನ ಎದೆಯನ್ನು ಬಿಚ್ಚಿ ತೋರಿಸುತ್ತಾ 'ಗುಟ್ರು ಗುಟುರ್' ಎಂದು ಸುತ್ತಲೂ ನಲಿದಾಡುತ್ತಲಿದೆ. ಇದನ್ನು ನೋಡುತ್ತಾ ಜೇಪಿನ ಮಗದ ಮೇಲಿನ ಗಿಣಿಗಳು—'ದಂಪತಿಗಳು ನಾವು, ಎಷ್ಟು ದೂರದಲ್ಲಿದ್ದೇವೆ. ಇದೇನು ನಾಚಿಗ್ಗೇಡು!' ಎನ್ನುತ್ತ, ಒಂದರ ಹತ್ತಿರಕ್ಕೆ ಮತ್ತೊಂದು ಸರಿಯುತ್ತಲಿವೆ. ಗೋಡೆಯಮೇಲೆ ಕೂತಿರುವ ಕಾಗೆಯು ಇವೆಲ್ಲವನ್ನೂ ನೋಡುತ್ತಾ 'ಮನುಷ್ಯರಿಲ್ಲದಿದ್ದರೆ, ಈ ಆರಾಮವು ಎಷ್ಟು ರಮ್ಯವಾಗಿರುತ್ತೆ, ಅವರಿನ್ನೂ ಏತಕ್ಕೆ ಬರಲಿಲ್ಲ?' ವೆಂದುಕೊಳ್ಳುತ್ತಾ ಕಾಕದೃಷ್ಟಿಯಿಂದ ದಿಕ್ಕುದಿಕ್ಕುಗಳಲ್ಲಿಯೂ ನೋಡುತ್ತಿದೆ. ಕೋಗಿಲೆಯೋ ಪಂಚಮಸ್ವರದಿಂದ ಮಧುಮಾಸವು ಬಂದಿತೆಂದು ತನ್ನ ಮೋಹದ ನೆಲೆಗೆ ತಿಳಿಯುವಂತೆ ಹಾಡುತ್ತಲಿದೆ.

ಕ್ರಿಮಿಕೀಟಾದಿಯಾಗಿ ಮನುಷ್ಯನವರೆಗೂ ತಮ್ಮ ತಮ್ಮ ಜೀವವನ್ನು ಕಾಪಾಡಿಕೊಳ್ಳುವುದು ಮೊದಲನೆಯ ಧರ್ಮ. ಆನಂತರ ತನ್ನ ವಂಶವನ್ನು ಶಾಶ್ವತಗೊಳಿಸುವ ನೈಸರ್ಗಿಕ ಬೋಧೆಯು ಎರಡನೆಯದು - ಇದರಿಂದ ಹುಟ್ಟುವುದೇ ವಿಷಯಾಸಕ್ತಿ (*Sexual Instinct*).

ಇಂಥಹದನ್ನು ಹುಡುಗರ ಮುಂದೆ ಹೇಳಬಹುದೆ? ಎಲ್ಲಾ ಪೋಕರಿಗಳಿಗೆ ಸರಿಯಾದ ಮಾತೇ ಹೊರತು ಗೃಹಸ್ಥರಿಗೆ ಸರಿಯೆ! ಈ ರೀತಿ ಹೇಳುವವರೆಷ್ಟೋ ಮಂದಿ. ವ್ಯಕ್ತಿಗೂ ಸಮಷ್ಟಿಗೂ ಇರುವ ಸಂಬಂಧವನ್ನರಿತು, ಎರಡರ ಮೇಲ್ಮೆಗಾಗಿಯೂ ಪ್ರವರ್ತನೆಯನ್ನು ಕಲಿಯುವುದೇ ವಿದ್ಯೆ. ಇದು ವಿಷಯಾಸಕ್ತಿಯ (*Sexual Instinct*) ವಿಚಾರ ತಿಳಿಯದಿದ್ದಲ್ಲಿ ಎಷ್ಟರಮಟ್ಟಿಗೆ ಸಾಧ್ಯ? ಗೃಹಸ್ಥನನ್ನಾಗಿ ಮಾಡಬೇಕೆನ್ನುತ್ತೀರಿ.—ಆದರೆ, ಗೃಹಸ್ಥನ ಕರ್ತವ್ಯಗಳನ್ನು ತಿಳಿಸದೆ ಮಾಡಬೇಕೆನ್ನುತ್ತೀರಲ್ಲ! ಮದುವೆ ಮಾಡುವುದು ತಂದೆತಾಯಿಗಳ ಕರ್ತವ್ಯವೆಂದು ಸಾರುತ್ತೀರಿ. ಮದುವೆ ಎಂದರೇನೆಂಬುದನ್ನು ತಿಳಿಸಲು ಹಿಂಜರಿಯಲೇಕೆ? ಈಜು ಕಲಿಸದೆ ನೀರಿನಲ್ಲಿ ತಳ್ಳಿದಂತಾಗಲಿಲ್ಲವೆ! ಕರ್ತವ್ಯವೆಂಬ ನೆಪದಿಂದ ಘೋರ ಪಾಪಕೂಪದಲ್ಲಿ ತಳ್ಳುತ್ತೀರಲ್ಲ! *

'ವಿವಾಹವೆಂದರೇನು? ಇದನ್ನು ಮಾಡಿಕೊಳ್ಳಲೇ ಬೇಕೆ? ಇದರ ಮುಖ್ಯ ತತ್ವವೇನು?' ಈ ರೀತಿ ಕೇಳುವವರು ಅತಿ ವಿರಳ. ಹಾಗೆ ಕೇಳಿದಾಗ್ಯೂ, ಅರ್ಥವಾಗುವಂತೆ ತಿಳಿಸುವವರೂ ಅತಿ ವಿರಳ. ಈ ವಿಚಾರದಲ್ಲಿ, ವಿಜ್ಞಾನವೇ ಮುಂತಾದುವುಗಳಲ್ಲಿ ಮಾಡುವಂತೆ, ಏನಾದರೂ ಕಂಡು ಹಿಡಿಯಲು ಪ್ರಯತ್ನಪಡುವುದಾಗಲಿ ಅಥವಾ ಬಹಳ ದಿನಗಳಿಂದಲೂ ಬಂದ ಒಂದು ತತ್ವವನ್ನು ಖಂಡಿಸುವುದಾಗಲಿ ಆದರೆ, ಅವರ ಮೇಲೆ ಇಲ್ಲದ ದೋಷಾರೋಪಣೆಗಳೇ! ಕಾಲಸ್ಥಿತಿಗತಿಗಳು ಬದಲಾಯಿಸಿದ ಹಾಗೆಲ್ಲಾ ನಾವೂ ಬದಲಾಯಿಸದಿದ್ದಲ್ಲಿ, ಜೀವನವು ಟೊಳ್ಳೇ.

ಈ ವಿಷಯಾಸಕ್ತಿಯು ಎಲ್ಲಾ ಪ್ರಾಣಿಗಳಲ್ಲಿಯೂ ಇದೆ. ಮೃಗ ಪಕ್ಷಿಗಳಲ್ಲಿ ಹುಟ್ಟಿದ್ದು ಹುಟ್ಟಿದಂತೆಯೇ ಇರುತ್ತದೆ; ನೈಜಸ್ವಭಾವವನ್ನು ಅತಿಕ್ರಮಿಸಲು ಸಾಧ್ಯವಲ್ಲ. ಯಾವ

ಯಾವ ಕಾಲದಲ್ಲಿ ಇದು ಮಹತ್ವವನ್ನು ಹೊಂದಬೇಕೆಂಬುದು ಸಹಜವಾಗಿ ಸಿದ್ಧಾಂತವಾಗಿದೆ ; ಋತುಧರ್ಮವನ್ನನುಸರಿಸಿ ಕುಗ್ಗುವುದೂ, ಹೆಚ್ಚುವುದೂ ಉಂಟಾಗಿ, ಮನುಷ್ಯರಲ್ಲಿದ್ದಂತೆ ಸ್ವೇಚ್ಛೆಯಾಗಿಲ್ಲ. ಮನುಷ್ಯನಿಗೂ ಮೃಗಗಳಿಗೂ ಇದೇ ತಾರತಮ್ಯ. ಈ ತಾರತಮ್ಯದಿಂದ ಅನುಕೂಲಗಳೂ ಪ್ರತಿಕೂಲಗಳೂ ಎರಡೂ ಇವೆ. ಇದನ್ನು ಸರಿಯಾದ ಮಾರ್ಗದಲ್ಲಿಟ್ಟಿದ್ದರೆ ಅನುಕೂಲ. ಅದಿಲ್ಲದೆ ಕಾಡಿನಲ್ಲಿ ಗಿಡಗಳು ಬೆಳೆದಂತಿದ್ದರೆ—ಅದರ ಪರಿಣಾಮವು ಅಲ್ಲೇ ಇದೆ.

ತಂದೆಯಂತೆ ಮಗು. ಬೇವಿನ ಮರದಲ್ಲಿ ಮಾವಿನ ಹಣ್ಣು ಬಿಟ್ಟೀತೆ! ಕತ್ತೆಮರಿ ಹುಟ್ಟುತ್ತ ಕುದುರೆ ಮರಿಯು ಇದ್ದಹಾಗಿದ್ದರೂ ಬೆಳೆಯುತ್ತ ಕತ್ತೆಯೇ! 'ವಂಶ'ದ ಗುಣಗಳು, ಎಲ್ಲಿ ಹೋದರೂ ಇದ್ದೇ ಇರುತ್ತವೆ— ಹೀನಸುಳಿ ಬೋಳಿಸಿದರೆ ಹೋಗುತ್ತೆಯೆ! ವಿದ್ಯೆಯಿಂದಲೂ, ತರಬೇತಿನಿಂದಲೂ, ವ್ಯಕ್ತಿಯನ್ನು ಹೇಗೆ ಬೇಕೋ ಹಾಗೆ ಮಾಡಬಹುದು ಎಂಬುದು ಚರ್ಚಾಸ್ಪದವಾಗಿದೆ. ಈ ವಿಚಾರದಲ್ಲಿ ಅಮೆರಿಕಾ ದೇಶದಲ್ಲಿನ ಮಾನವಶಾಸ್ತ್ರಜ್ಞರು, ಕೆಲವು ಮನೆತನದವರ ಚರಿತ್ರೆಗಳನ್ನೆಲ್ಲಾ ವಿಂಗಡಿಸಿ, ಕೆಲವು ಮುಖ್ಯಾಂಶಗಳನ್ನು ತಿಳಿಯಪಡಿಸಿರುತ್ತಾರೆ. ಬುದ್ಧಿಕುಶಲತೆಯುಳ್ಳವರ ಕಡೆಯೇ ಅಲ್ಲ ; ವಿರೋಧಿ (*Delinquents*) ಗಳ ಕಡೆಗೂ ಗಮನ ಕೊಟ್ಟಿದ್ದಾರೆ. "540 ಮಂದಿ ಪೈಕಿ, ಐದರಲ್ಲೊಂದು ಭಾಗ ಮದುವೆಯಾದ ಮೇಲೆ ಹುಟ್ಟಿದವರು : 37 ಮಂದಿ ಭಗಂಧರವೇ ಮುಂತಾದ ರೋಗಗಳನ್ನುಳ್ಳವರು ; 53 ಮಂದಿ 'ಪೂರ್ ಹೌಸ್' ನಲ್ಲಿದ್ದವರು ; 76 ಮಂದಿ ಜೈಲಿಗೆ ಹೋಗಿದ್ದವರು ಮತ್ತೆ 229 ಪ್ರೌಢೆಯರ ಪೈಕಿ, 128 ಜಾರಸ್ತ್ರೀಯರು. ಇದರಿಂದ ನ್ಯೂಯಾರ್ಕ್ ಸಂಸ್ಥಾನಕ್ಕೆ

---

**Herbart Spencer - Education Ch. I.*

ಈಗ 75 ವರ್ಷಗಳಿಂದ ಸುಮಾರು 39,00,000 ರೂಪಾಯಿಗಳಷ್ಟು ನಷ್ಟ—ರೋಗ ಮುಂತಾದುವುಗಳಿಂದ ಆದ ತೊಂದರೆ ಬಿಟ್ಟು." *The Jukes by R. L. Dugdale.*

‡ 'ಕ್ಯಾಲಿಕ್ಯಾಕ್' ಎಂಬ ಪುಸ್ತಕದಲ್ಲಿ, ವಿಲೋಪ (*Delinquency*) ವು ಹೇಗೆ ಹರಡುವುದೆಂಬುದನ್ನು ತೋರಿಸಲೋಸುಗ ಪ್ರತಿಒಬ್ಬರ ಜೀವಮಾನದಲ್ಲಿ ನಡೆದ ಮುಖ್ಯ ಮುಖ್ಯ ಕೆಲಸಗಳೆಲ್ಲವನ್ನೂ ಬಣ್ಣಿಸಿರುವುದಲ್ಲದೆ, ಅವರ ಶೀಲ ಮುಂತಾದುವುಗಳನ್ನೆಲ್ಲಾ ಚೆನ್ನಾಗಿ ವಿವರಿಸಿದ್ದಾರೆ. ಒಳ್ಳೇ ಮನೆತನಕ್ಕೆ ಸೇರಿದ ಒಬ್ಬ ಯುವಕನು, ಒಬ್ಬಳನ್ನು ಮದುವೆಯಾಗಿ, ಮತ್ತೊಬ್ಬಳನ್ನಿಟ್ಟುಕೊಂಡಿದ್ದ. ಮದುವೆ ಮಾಡಿಕೊಂಡು ಸಂಸಾರ ಮಾಡುತ್ತಿದ್ದ ಹೆಂಡತಿಗೆ ಹುಟ್ಟಿದ ಮಕ್ಕಳು, ಮರಿಮಕ್ಕಳು (496) ಒಳ್ಳೇವರೇ ಆದರು. ಇನ್ನೊಬ್ಬಳಿಗೆ ಹುಟ್ಟಿದವರ ಪೈಕಿ ಮುಕ್ಕಾಲುಪಾಲು (480) ಜೂಜುಕೋರರು, ಹೆಂಡಕುಡುಕರು, ಜಾರರು, ಮುಂತಾದವರೇ !




* (1) ಗಂಡಹೆಂಡಿರಿಬ್ಬರೂ ವಿಲೋಪಿಗಳಾದರೆ ಶಿಶುವೂ ಕೂಡ ವಿಲೋಪಿಯೇ.

(2) ಶಿಶುವು ಹುಚ್ಚಾಗಲಿ, ವಿಲೋಪಿಯಾಗಲಿ ಆಗಬೇಕಾದರೆ ಗಂಡಹೆಂಡಿರಿಬ್ಬರಲ್ಲಿ, ಒಬ್ಬರಾದರೂ ಹುಚ್ಚಾಗಲಿ, ವಿಲೋಪಿಯಾಗಲಿ ಆಗಿರಬೇಕು.

ಈ ತತ್ವಗಳ ನಿಜಾಂಶವು ಈ ಕ್ಯಾಲಿಕ್ಯಾಕ್ ವಂಶದಿಂದ ತಕ್ಕಮಟ್ಟಿಗೆ ಸ್ಥಾಪಿಸಿದಂತಾಗಿದೆ. ದೆಬೋರಾ ಎಂಬುವಳು 'ಖಿಲು'. ಇದಕ್ಕೆ ಕಾರಣವೇನಿರಬಹುದೆಂದು ತಿಳಿಯಲೋಸುಗ ಈ ವಂಶದ ಚರಿತ್ರೆಯನ್ನೇ ತಿಳಿಯಬೇಕಾಯಿತು. ಗಂಡಹೆಂಡಿರಿಬ್ಬರೂ ಸರಿಯಾಗಿದ್ದರೆ (ಸ, ಸ,) ಶಿಶುವೂ ಸರಿಯಾಗಿರುತ್ತದೆ. ಹಾಗಿಲ್ಲದೆ ಅವರಲ್ಲಿ ಯಾರಾದರೂ ಒಬ್ಬರಾದರೂ ವಿಲೋಪಿಯಾದರೆ (ಸ, ವಿ. ಅಥವಾ ವಿ, ಸ) ಶಿಶುವೂ ವಿಲೋಪಿಯೇ!

ಇಷ್ಟೇ ಅಲ್ಲ. ಮಗುವಿನ ಶೀಲಕ್ಕೂ, ತಂದೆ ತಾತ ಮುತ್ತಾತಂದಿರ ಶೀಲಗಳಿಗೂ ಇರುವ ಸಂಬಂಧವನ್ನು ಗಾಲ್ಟನ್ (*Galton*) ಎಂಬಾತನು ಕೊಟ್ಟಿದ್ದಾನೆ. ಶಿಶುವಿಗೆ ತಂದೆ ತಾಯಿಗಳ ಪಾಲು ಕಾಲು ಭಾಗ; ತಾತ ಅಜ್ಜಿಗಳ ಪಾಲು $1/8$; ಮುತ್ತಾತಂದಿರದು $\frac{1}{16}$; ಈ ರೀತಿಯಾಗಿ ಬರುತ್ತವೆಂಬುದು ಈತನ ಮತ. ಕ, ಎಂಬಾತನು, ಚ, ಎಂಬಾಕೆಯನ್ನು ಮದುವೆಯಾದನೆಂಬೋಣ. ಅ. ಎಂಬಾತನು ಇ. ಯನ್ನು ಮದುವೆಮಾಡಿಕೊಂಡು ಖು ಎಂಬಾಕೆಯೇ ಮಗಳೆಂಬೋಣ. ಖು, ತ, ನನ್ನು ಮದುವೆಯಾಗಿ 'ಟ' ಹೆತ್ತರೆ, ಆ ಮಗುವಿನ ಗುಣಗಳು ಮೇಲೆಹೇಳಿದ ಸೂತ್ರದಂತೆ ಇಷ್ಟಿರಬೇಕು.
—$1/4$ ತ-|-$1/4$ ಖು-|-$1/8$ ಕ-.-$1/8$ ಚ-|-$1/8$ ಅ-|-$1/8$ ಇ......
ಈ ಸೂತ್ರವು ನಿಜವಾದ ಪಕ್ಷದಲ್ಲಿ, ಮೂರು ತಲೆಗಳ ನಂತರ

---

**Heredity in relation to Eugenics—Davenport.*

*‡The Kallikak Family—Goddard.*

ಶಿಶುವಿನ ಚಾಲು ಹೇಗಿರಬಹುದೆಂದು ನೀವೇ ಊಹಿಸಬಹುದು. - ಮನುಷ್ಯರು ಮನುಷ್ಯರ ಹಾಗಿರುತ್ತಾರೆಯೆ ಎಂಬುದೊಂದೇ (*Reid*)



ವಂಶದ ಮೂಲಕ ಹೀಗೆ ಹುಟ್ಟುತ್ತ ಕೆಲವು ಗುಣಗಳು ಬರುವುದು ನಿಜವಾದರೆ, ಮೊರೆವಳಿಯ ಮೂಲಕ ಚಾಲು ಬರುವುದೂ ಉಂಟೆ? ಒಂದು ಪ್ರಾಣಿಯು ತನ್ನ ಪ್ರಾಣವನ್ನು ಕಾಪಾಡಿಕೊಳ್ಳಲೋಸುಗ, ಯಾವುದಾದರೂ ಒಂದನ್ನು ಕಲಿತರೆ, ಅದರ ಹೊಟ್ಟೆಯಲ್ಲಿ ಹುಟ್ಟುವ ಮರಿಗೂ ಸಹ ಅದು ಬಂದಿರುತ್ತದೆಯೋ? ಅಪ್ಪ ಸಂಗೀತಗಾರನಾದರೆ, ಮಗನೂ ಸಂಗೀತಗಾರನಾಗಿಯೇ ಹುಟ್ಟುತ್ತಾನೆಯೆ? ಅಪ್ಪ ವಿದ್ಯಾವಂತನಾಗಿದ್ದರೆ, ಮಗನೂ ವಿದ್ಯಾವಂತನಾಗಿಯೇ ಆಗುತ್ತಾನೆಯೇ? ಇದಕ್ಕೆ ಕೆಲವರು 'ಉಂಟು' ಎನ್ನುತ್ತಾರೆ. ಲಾಮಾರ್ಕ್ (*Lamark*) ಎಂಬಾತನು ಇದು ನಿಜವೆಂದು ಸಾಧಿಸಲು ಹೊರಟವರಲ್ಲಿ ಮೊದಲನೆಯವನು. ಆತನು ಇದಕ್ಕೆ ದೃಷ್ಟಾಂತರವಾಗಿ ಮೃಗಗಳಲ್ಲಿ ಜಿರಾಫೆಯನ್ನು ತೆಗೆದುಕೊಂಡಿದ್ದಾನೆ. ಎಲ್ಲಾ ಮೃಗಗಳೂ ಮರದ ಎಲೆಗಳನ್ನು ತಿನ್ನಲಾರಂಭಿಸಿದವು. ಈ ಜಿರಾಫೆಗೆ ಎಲೆಗಳು ಸಿಗುತ್ತಿರಲಿಲ್ಲವಾಗಿ ಕತ್ತನ್ನೆತ್ತಿ, ಮೇಲುಗಡೆ ಇರುವ ಎಲೆಗಳನ್ನು ತಿನ್ನಲು ಮೊದಲು ಮಾಡಿತು. ಹೀಗೆಯೇ ಕತ್ತೆತ್ತೀ ಎತ್ತೀ, ಅದರ ಕತ್ತು ಉದ್ದವಾದದ್ದೂ ಅಲ್ಲದೆ, ಅದರ ಮರಿಗಳೂ

ಕೂಡ ಹುಟ್ಟುತ್ತಲೇ ಉದ್ಭವಾದ ಕತ್ತುಸಿಟ್ಟುಕೊಂಡೇ ಹುಟ್ಟಿದವು. ಪಂಡಿತಪುತ್ರರು ಎಷ್ಟೋ ಮಂದಿ 'ಪಂಡಿತಪುತ್ರ'ರಾಗಿರುತ್ತಾರೆಂದಮೇಲೆ ಇದರ ಸಿದ್ಧಾಂತದ ವಿಚಾರವಾಗಿ ಅಷ್ಟು ಹೇಳಬೇಕಾದ್ದಿಲ್ಲ. ಇದೇನಾದರೂ ನಿಜವಾಗಿದ್ದ ಪಕ್ಷದಲ್ಲಿ ಹುಡುಗರಿಗೆ ಪಾಠಹೇಳುವುದೇನೋ ಬಹಳ ಸುಲಭ. ತಂದೆ ಓದಿರೋದೆಲ್ಲಾ ಮಗನಿಗೆ ಬಂದಮೇಲೆ ಇನ್ನು ಪಾಠ ಏಕೆ! ಆದಾಗ್ಯೂ ಕೆಡಕೇ ಹೆಚ್ಚಾಗುತ್ತಿತ್ತು? ಏಕೆಂದರೆ ತಂದೆ ಏನು ಕೆಟ್ಟ ಕೆಲಸಗಳನ್ನು ಮಾಡಿದ್ದಾಗ್ಯೂ ಅದರ ಪ್ರತಿಫಲ ಮಗುವಿನ ಪಾಲಿಗೇ ಬರುತ್ತಿತ್ತು. ಆದುದರಿಂದ ಮಗುವನ್ನು ಒಳ್ಳೇ ದಾರಿಯಲ್ಲಿ ಇರುವಂತೆ ತರಬೇತು ಮಾಡುವುದು, ಈಗಿನಗಿಂತ, ಸಾವಿರ ಪಾಲು ಕಷ್ಟವಾಗುತ್ತಿತ್ತು. ಆಗ ವಂಶದಿಂದ ಬಂದ ಹುಳುಕೇ ಅಲ್ಲದೆ, ಹೊರವಳೆಯಿಂದೊದಗಬಹುದಾದ ಕೇಡುಗಳೂ ಸಹ, ಮಗುವಿನ ಚಾಲನ್ನು ಬದಲಾಯಿಸುತ್ತಿದ್ದವು. ಹೇಗಾದರೂ ಆಗಲಿ, ಇದರ ಸಿದ್ಧಾಂತವು ಇನ್ನೂ ಚರ್ಚಾಸ್ಪದವಾಗಿಯೇ ಇದೆ.

ಈ ವಿಷಯಾಸಕ್ತಿಯ ಮಹತ್ವವನ್ನು ಪಾಶ್ಚಿಮಾತ್ಯ ಮಾನಸಶಾಸ್ತ್ರಜ್ಞರಲ್ಲಿ ಮೊಟ್ಟಮೊದಲು, ತೋರಿಸಿದಾತನು ಫ್ರಾಯಿಡ್ಡೆಂಬುವನು. (*Sigsmund Freud*). ಮಕ್ಕಳನ್ನು ಅಧೋಗತಿಗೆ ತಳ್ಳುವುದೂ, ಅವುಗಳನ್ನುದ್ಧಾರಮಾಡುವುದೂ, ಈ ವಿಷಯಾಸಕ್ತಿಯೇ, ಎಂಬುದು ಈತನ ಮತ. ಆಡ್ಲರ್ (*Adler*) ಎಂಬಾತನಾದರೋ ಮಕ್ಕಳಿಗೆ 'ಅಧಿಕಾರದ' ಆಶೆಯೇ ಅವರ ಜೀವನದಲ್ಲಿ ಮಹತ್ವವನ್ನು ಹೊಂದಿರುತ್ತೆಂದು ಒತ್ತಿ ಹೇಳುತ್ತಿರುವನು. ಜಂಗ್ (*Jung*) ಎಂಬಾತನನ್ನು ಕೇಳಿದರೆ, ಮಕ್ಕಳ ಜೀವನಕ್ಕೆಲ್ಲಾ ನೈಸರ್ಗಿಕ ಘೋಷಿಸು ಶಕ್ತಿಯೇ ಕಾರಣವೆಂದು ಹೇಳಿ, ಅದಕ್ಕೆ 'ಲಿಬಿಡೋ' (*Libido*) ಎಂದು ಕರೆಯುತ್ತಿರುವನು. 'ವಿಷ

ಯಾಸಕ್ತಿಯು ಮಕ್ಕಳಲ್ಲಿ ನಾನಾವಿಧವಾಗಿರುತ್ತದೆ. ಮಕ್ಕಳಲ್ಲಿ ಇದು ಸಂಭೋಗಾಸಕ್ತಿಯನ್ನುಂಟುಮಾಡುವುದಿಲ್ಲ. ಇದರ ಮೂಲಕ ನಾನಾ ಬಗೆಯ ಸುಖ ಉಂಟಾಗುವುದರಿಂದ ಮಕ್ಕಳಲ್ಲಿ ಇದು ಬಹಳ ಬೇಗ ಪ್ರಾಬಲ್ಯವನ್ನು ಹೊಂದುತ್ತದೆ (*Freud*)." ಈ ಮತವನ್ನು ಅನೇಕರು ಖಂಡಿಸಿರುವರು. ಆದಾಗ್ಯೂ ಈಗ್ಗೆ ಯೂರೋಪು, ಅಮೆರಿಕ ದೇಶಗಳಲ್ಲಿ ಪ್ರಚಾರದಲ್ಲಿರುವ 'ಸೈಕೋ ಅನಾಲಿಸಿಸ್'(*Psycho analysis*) ಈ ಫ್ರಾಯಿಡ್ಡಿನಿಂದ ಹುಟ್ಟಿದ್ದೇ; ಇದಕ್ಕೆ ಮೂಲ ವಿಷಯಾಸಕ್ತಿಯ ಚರ್ಚೆಯೇ.

ಮನುಷ್ಯನಿಗೂ ಮೃಗಗಳಿಗೂ ಈ ವಿಚಾರದಲ್ಲಿ ಬಹಳ ತಾರತಮ್ಯ. ಇದಕ್ಕೆ ಮನುಷ್ಯನಿಗೆ ಸ್ವೈಸರ್ಗಿಕ ಚೋದನೆಗಳಿಲ್ಲದಿರುವುದೇ ಕಾರಣವೆಂಬುದು ಕೆಲವರ ಅಭಿಪ್ರಾಯ. ಆದರೆ ಮನುಷ್ಯನಿಗೆ ಸ್ವೈಸರ್ಗಿಕ ಚೋದನೆ (*Instincts*) ಗಳಿಲ್ಲದೆಯಿಲ್ಲ. ಇವನ್ನು ಬುದ್ಧಿ ಪೂರ್ವಕವಾಗಿ ತಪ್ಪಿಸ್ಕೃದಂತೆ ತಿರುಗಿಸುವುದು ಮನುಷ್ಯರ ಕೈಲಿದೆ. 'ಗ್ರಾಮೋಫೋನ್' ಇಟ್ಟರೆ, ಆ 'ಪ್ಲೇಟು' ಹಾಕಿದಾಗಲೆಲ್ಲಾ ಅದೇ ಹಾಡೇ—ಅದರಂತೆ ಮಿಕ್ಕ ಪ್ರಾಣಿಗಳು. ಮನುಷ್ಯನಲ್ಲಾದರೋ ಯಾವುದು ಯಾವ ರೀತಿಯಾಗುವುದೆಂದು ಹೇಳುವುದು ಕಷ್ಟ. ರೆಕ್ಕೆ ಹುಳಗಳು ಎದ್ದೊಡನೆ, ದೀಪವನ್ನು ಕಂಡರೆ ಅದರ ಕಡೆಗೇ ಹೋಗಿ ಸಾಯುತ್ತವೆ. ಆದರೆ ಮನುಷ್ಯನಿಗೆ ಮೆದುಳೆಂಬುದೊಂದಿದೆ. ಈ ಮೆದುಳಿನ ಮೂಲಕ ಸ್ವೈಸರ್ಗಿಕ ಚೋದನೆಗಳೆಲ್ಲವನ್ನೂ ಸ್ವಾಧೀನಪಡಿಸಿಕೊಳ್ಳುವ ಶಕ್ತಿ, ಮನುಷ್ಯನಿಗಿದೆ. ಸ್ವಾಧೀನಪಡಿಸಿಕೊಳ್ಳದೆ, ಅದನ್ನು ಅಮುಕಲು (*repress*) ಪ್ರಯತ್ನಪಟ್ಟರೆ ಅದು 'ಅಡ್ಡದಾರಿ' ಹಿಡಿಯುತ್ತದೆ (*Perverse*). ಅದನ್ನು ಹಾಗೆಯೇ ಬಿಟ್ಟರೆ, ಕಾಯಿಲೆ ಸಂಭವಿಸಿ, 'ನ್ಯೂರೋಸಿಸ್' (*Neurosis*) ಆಗುತ್ತದೆ. ಚಿಕ್ಕ ಮಕ್ಕಳಿಗೂ ಸಹ ಹೀಗಾಗುತ್ತದೆ.

ನನೇ ಗಂಡಸರಿದ್ದಾರೆಂದು ಭಯವೇ ಇಲ್ಲ' ಎನ್ನುತ್ತ ಹೊಡೆಯುವುದನ್ನೂ, ಬೈಯುವುದನ್ನೂ ಎಷ್ಟೋ ಸಲ ಕೇಳಿದ್ದೇನೆ. ಇದು ಎಷ್ಟರಮಟ್ಟಿಗೆ ಮಕ್ಕಳ ಮೆದಳಿಗೆ ಹತ್ತುತ್ತೆಂಬುದು ಹೊಡೆಯುವವರಿಗೆ ತಿಳಿಯದು.

ಲಿನ್ನೆಟ್—ಆ ಟೀ ಪಾತ್ರೆಯನ್ನು ನನಗೆ ಕೊಡು.

ತಾಯಿ—ನಿನಗೆ ಮದುವೆಯಾದ ಮೇಲೆ—

ಲಿನ್ನೆಟ್—ನಾನು ಮದುವೆ ಮಾಡಿಕೊಳ್ಳುವುದಿಲ್ಲ.

ತಾಯಿ—ಚಿಕ್ಕ ಮಗು, ನಿನಗೆ ಮದುವೆ ವಿಚಾರ ಏನು ಗೊತ್ತು ?

ಲಿನ್ನೆಟ್—(ತನ್ನ ಕೈಗಳಿಂದ ಮುಖವನ್ನು ಮುಚ್ಚಿ, ತಾಯಿಯ ತೊಡೆಯ ಮೇಲಿಟ್ಟುಕೊಂಡು) ನಿನಗೆ ನಾನು ಹೇಳುವುದಿಲ್ಲ.

ತಾಯಿ—ಸರಿ, ಬೇಡ. ಗಂಡಂದಿರು ಕರಡಿಗಳು (—*Husbands are horrid.*)

ಲಿನ್ನೆಟ್—ಗಂಡಂದಿರು ಟೀಪಾತ್ರೆಯಂತೆಯೇ ಕೆಟ್ಟವರು.

ತಾಯಿ—ಟೀ ಪಾತ್ರೆ, ಏತಕ್ಕೆ ಕೆಟ್ಟಿದ್ದು ?

ಲಿನ್ನೆಟ್—ಮುಟ್ಟಿದರೆ ಸುಡುತ್ತದೆ.

ಲಿನ್ನೆಟ್ಟಿಗೆ ತನಗಿಂತ ಚಿಕ್ಕವರಲ್ಲಿಯೂ, ಸಮವಯಸ್ಕರಲ್ಲಿಯೂ, ಯಾವಾಗಲೂ ಹೊಡೆದಾಟವೇ. ಪಾಠಶಾಲೆಯಲ್ಲಿ ಕೆಲವು ತಿಂಗಳಿರುವುದೇ ಕಷ್ಟವಾಗಿತ್ತು. ಮದುವೆಯೆಂದರೆ ಆವಳಿಗೆ ಮಾಡಬಾರದ್ದೇನನ್ನೋ ಮಾಡಿದ ಹಾಗೆಯೇ (*Case 1. Linette. Studies in Psycho analysis, Baudouin*).

ಈ ವಿಷಯಾಸಕ್ತಿಯ ವಿಚಾರವನ್ನು ಚೆನ್ನಾಗಿ ತಿಳಿದುಕೊಳ್ಳದಿರುವುದರಿಂದ ನಮಗೀಗ ಸಾಕಾದಷ್ಟು ಕೇಡಾಗಿದೆ.

ಇಂಡಿಯಾ ದೇಶದಲ್ಲಿನ ಜನರ ಆಯುಃಪ್ರಮಾಣಕ್ಕೂ, ಮಿಕ್ಕ ಜನಾಂಗದವರ ಆಯುಃಪ್ರಮಾಣಕ್ಕೂ ಎಷ್ಟು ತಾರತಮ್ಯವಿದೆ ? ಇಲ್ಲಿ ಸಾಯುವ ಮಕ್ಕಳ ಸಂಖ್ಯೆಗೂ ಅಲ್ಲಿ ಸಾಯುವ ಮಕ್ಕಳ ಸಂಖ್ಯೆಗೂ ಎಷ್ಟು ಹೆಚ್ಚು ಕಡಿಮೆ ? ಇಲ್ಲಿನ ಜನರ ಸಂಪಾದನೆಗೂ ಬೇರೆ ಬೇರೆ ದೇಶದಲ್ಲಿರುವ ಜನರ ಸಂಪಾದನೆಗೂ ಹೋಲಿಸಿ ನೋಡಿ. ಈ ವಿಚಾರವಾಗಿ, ಫಾಡ್ಕೆಯವರು ತಮ್ಮ ಪುಸ್ತಕದಲ್ಲಿ ಸಾಕಾದಷ್ಟು ರುಜುವಾತುಗಳಿಂದ ಸಮಗ್ರವಾಗಿರುವ ನಷ್ಟವನ್ನು ತಿಳಿಸಿದ್ದಾರೆ.* ಈ ವಿಷಯಾಸಕ್ತಿಯ ತಂಟೆಗೆ ಹೋಗದೆ, ಈಗ ಬೆಳೆಯುವಂತೆಯೇ ಅದನ್ನು ಅಡಚಣೆ ಮಾಡದೆ ಬಿಟ್ಟರೆ, ಇನ್ನು ಸ್ವಲ್ಪ ಕಾಲದಲ್ಲಿಯೇ ನಾನಾ ಕಷ್ಟ ತೊಡಕುಗಳು ಬಿದ್ದು, ಉಗುರಿನಲ್ಲಿ ಆಗುವ ಕೆಲಸಕ್ಕೆ ಗೊಡ್ಡಲಿ ತೆಗೆದುಕೊಂಡು ಬರಬೇಕಾಗುತ್ತೆ.

ಇದನ್ನು ಯಾವ ರೀತಿಯಲ್ಲಿ ವಶಪಡಿಸಿಕೊಳ್ಳಬೇಕು ? ಇದನ್ನು ಅಮುಕಲು (*Repress*) ಸಾಧ್ಯವೆ ? ಸಾಧ್ಯ. ಆದರೆ ಅಮುಕುವುದರಿಂದ ಪ್ರಯೋಜನವಿಲ್ಲ. ಏತಕ್ಕೆಂದರೆ ಹಾಗೆ ಮುಚ್ಚಿಡುವುದರಿಂದ ಅದು ವ್ಯಕ್ತಿಯನ್ನು ಬಿಟ್ಟು ಕದಲದೆ, ವ್ಯಕ್ತಿಗೆ ಇಲ್ಲದ ತೊಂದರೆ ಕೊಡುತ್ತದೆ. ಇದಕ್ಕೆ ನನಗೆ ತಿಳಿದ ಹಾಗೆಯೇ ಒಂದು ದೃಷ್ಟಾಂತರವಿದೆ. ನಾವೆಲ್ಲರೂ ಕಾಲೇಜಿನಲ್ಲಿ ಓದುತ್ತಿದ್ದಾಗ, ನಮ್ಮೊಡನಾಡಿಯೊಬ್ಬನು, ನಮ್ಮೊಡನೆ ಓಡಾಡುತ್ತಿದ್ದಾಗ್ಯೂ, ಒಂದು ಮಾತನ್ನೂ ಆಡುತ್ತಿರಲಿಲ್ಲ ; ಯಾರಾದರೂ ಅವನೊಡನೆ ಮಾತನಾಡಲು ಮೊದಲು ಮಾಡಿದರೆ ಅವನಿಗೆ ಎಲ್ಲೂ ಇಲ್ಲದ ನಾಚಿಕೆ. ಮುಖವೆಲ್ಲ ಕೆಂಪೇರುತ್ತಿತ್ತು. ಹುಡುಗರು - ಸಿಕ್ಕಿದ ಹಾಗೆ ಮಾತನಾಡುತ್ತಿದ್ದೆವು. ಆದರೆ ಅವನು ಮಟ್ಟಿಗೆ ಒಬ್ಬಳ

---

**Sex-Problem in India—by Prof. N.S. Phadke.*

ಗಂಭೀರವಾಗಿರುತ್ತಿದ್ದ. ಈಗ್ಗೆ ಸುಮಾರು ಒಂದೂವರೆ ವರ್ಷಕ್ಕೆ ಹಿಂದೆ ಇದ್ದಕಿದ್ದ ಹಾಗೆಯೇ ಅವನಿಗೆ ಹುಚ್ಚು ಹಿಡಿಯಿತೆಂದರು. ಇದಕ್ಕೆ ಕಾರಣ ಒಬ್ಬ ಹುಡುಗಿ - ಬಾಲ ವಿಧವೆ. ಈಕೆಗೂ ನಮ್ಮ ಸ್ನೇಹಿತನಿಗೂ ಮಾತುಕತೆ ಇತ್ತೆಂಬುದು ನಮಗೆ ತಿಳಿದಿತ್ತು. ಇದ್ದಕಿದ್ದ ಹಾಗೆಯೇ ಅಮುಕಿಟ್ಟ ವಿಷಯಾಸಕ್ತಿ (*Sexual Instinct*) ಯು ತಲೆಗೇರಿತೆಂದು ತೋರುತ್ತೆ. ಆದಕ್ಕಾಗಿಯೇ ಇದನ್ನು ವಶಪಡಿಸಿಕೊಳ್ಳಬೇಕಾದರೆ, ಇದನ್ನು ಅಮುಕಿ ಹಿಡಿದರೆ ಪ್ರಯೋಜನವಿಲ್ಲ.

ಕೆಲವು ಸಂದರ್ಭಗಳಲ್ಲಿ ಇದನ್ನು ಅಮುಕಲು ಪ್ರಯತ್ನಪಟ್ಟಾಗ್ಯೂ, ಇದೇ ಬೇರೇ ದಾರಿಯನ್ನು ಹುಡುಕುವುದೂ ಉಂಟು. ಹಿಂದೆ ಕೊಟ್ಟ ಒಂದು ದೃಷ್ಟಾಂತರವೇ ಸಾಕು. ಗಂಡ ಹೆಂಡಿರು (ಕೆಲವು ಸಂದರ್ಭದಲ್ಲಿ ಗಂಡಸರು ಹೆಂಗಸರು) ಒಬ್ಬರನ್ನೊಬ್ಬರು ನೋಡಿದರೆ ನಗುತ್ತಾರೆ. ಈ 'ನಗು' ವಿಷಯಾಸಕ್ತಿಯ ಬೇರೆ ಅವತಾರ. ಹೀಗೆ ವಿಷಯಾಸಕ್ತಿಯನ್ನು ನಮಗೆ ಬೇಕಾದಹಾಗೆ ಉಪಯೋಗಿಸಿಕೊಳ್ಳಲೂ ಬಹುದು. ಈ 'ಅವತಾರ'ವನ್ನು ಮಾನಸ ಶಾಸ್ತ್ರಜ್ಞರು 'ಸಬ್ಲಿಮೇಷನ್' (*Sublimation*) ಎಂದು ಕರೆಯುವರು. ಐತ ಎಂಬ ಹುಡುಗಿಯನ್ನು ನೋಡಿ, ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ಯುವಕನು ಶೃಂಗಾರ ಚೇಷ್ಟೆಯನ್ನು ಮಾಡಿದನು. ಹುಡುಗಿಯು ಇದನ್ನು ನೋಡಿದ ಕೂಡಲೆ ಅವಳಿಗೇನೋ ಒಂದು ಬಗೆಯ ಭಯವುಂಟಾಗಿ, ಅಂದಿನಿಂದಾಚೆಗೆ ಒಳ್ಳೆ ಬಟ್ಟೆಗಳನ್ನು ಹಾಕಿಕೊಳ್ಳುವುದನ್ನೇ ಬಿಟ್ಟಳು. ಆದರೆ ತನ್ನ ಜೊತೆಗಳಿಗೆಲ್ಲಾ ಸೊಗಸಾದ ಬಟ್ಟೆಗಳನ್ನೇ ಉಡಿಸಿ, ಆದರೊಡನಾಡುತ್ತಿದ್ದಳು. ಹೀಗೆ ಬರುತ್ತ ಬರುತ್ತ ವಿಚಿತ್ರವಾಗಿ ಕಂಡು ಬಂದಿತು. ರಜಸ್ವಲೆಯಾದಾಗಲೆಲ್ಲಾ ಅವಳಿಗೆ ಇಲ್ಲದ ಸಂಕಟ, ಎಲ್ಲಿ ಏನು ಶಬ್ದವಾದರೂ ಹೆದರಿಕೆ, ಹೀಗಾಯಿತು. ಎಷ್ಟು ಔಷಧಿಗಳಾದಾಗ್ಯೂ ಏನೂ ಪ್ರಯೋಜನ

ವಿಲ್ಲದೆ ಹೋಯಿತು. ಆಗ, ಅವಳಿಗೆ ಪಠಗಳನ್ನು ಬರೆಯು ವುದು ಬಣ್ಣ ಹಾಕುವುದು ಇದರಲ್ಲಿ ಬಹಳ ಇಷ್ಟವೆಂದು ಕಂ ಡು ಬಂದದ್ದರಿಂದ, ಅವಳ ತಂದೆ ತಾಯಿಗಳಿಗೆ ಅವಳಿಗೆ ಆ ಕೆ ಲಸಗಳನ್ನೇ ಹೆಚ್ಚಾಗಿ ಕೊಡಬೇಕೆಂದುಹೇಳಲಾಯಿತು. ವಿಷ ಯಾಸಕ್ತಿಯು ಈ ಅವತಾರವನ್ನು ಹೊಂದಿತಾಗಿ, ಬರುತ್ತ ಬರುತ್ತ, ಅವಳ ಖಾಯಿಲೆಯು ಕಡಿಮೆಯಾಯಿತು. ಆರು ತಿಂಗಳಾದನಂತರ ಗುರ್ತು ಸಿಕ್ಕುವುದೇ ಕಷ್ಟವಾಯಿತು. (*2. Ide Studies in Phycho-analysis, Bandouin*) ಇದಕ್ಕಿಂತಲೂ ಸಾಕಾದಷ್ಟು ದೃಷ್ಟಾಂತರಗಳನ್ನು ಕೊಡಬಹುದು.

ಬಹಳ ಬಿನಗಳಿಂದಲೂ ಈ ವಿಷಯಾಸಕ್ತಿಯು ಅವತಾರ ಗಳನ್ನು ಹೊಂದುತ್ತದೆಂಬುದು ತಿಳಿದಂತಿದೆ. ರೂಸೋ (*Rousscan*) ಎಗೆ 'ಹೆಂಗಸನ್ನು ಬಿಟ್ಟು, ಗಣಿತವನ್ನು ಕಲಿ!' ಎಂದು ಒಬ್ಬ ಹೆಂಗಸು ಹೇಳಿದಹಾಗೆ ವದಂತಿ. "ಅಸ್ಟ್ರಿಯಾದೇಶದ ಒಬ್ಬ ಮೂವತ್ತು ವರ್ಷದ ಹೆಂಗಸು ಇದ್ದಕ್ಕಿದ್ದ ಹಾಗೆಯೇ ಪದ್ಯಗಳನ್ನು ಓದುವುದನ್ನು ಬಿಟ್ಟು, ಸಿದ್ಧಾಂತವನ್ನು ಕಲಿಯಲಾರಂಭಿಸಿದಳು. ಅಲ್ಲಿಂದಾಚೆಗೆ ಅವ ಳಿಗೆ ತಲೆಯಲ್ಲಿ ಏನೋ ಒಂದು ವಿಧವಾದ ನೋವು (ಅವಳು ಓದುತ್ತಿದ್ದುದರಲ್ಲಿ ಪೋಲೆಂಡ್ ದೇಶದಲ್ಲಿ ಒಬ್ಬ ಕಥಾನಾಯಕಿ ಯು, ಸರಿಯಾದ ಗಂಡ ಸಿಕ್ಕದೇ ಇದ್ದುದಕ್ಕಾಗಿ ಪಿಸ್ತೂಲ ನ್ನು ತಲೆಗಿಟ್ಟುಕೊಂಡು ಹೊಡೆದುಕೊಂಡು ಸತ್ತಳು.) ಅವ ಳ ಗಂಡನು ಅವಳಿಗಿಂತ ಎಲ್ಲಾ ವಿಷಯದಲ್ಲಿಯೂ ಹೆಚ್ಚಿನವ. ಅವನನ್ನು ಕಂಡರೆ ಗೌರವ. ಆದರೆ ಒಬ್ಬ ಕುರೂಪಿಯಲ್ಲಿ ಇವಳ ಮೋಹ. ಚಿಕ್ಕ ಹುಡುಗಿಯಾಗಿದ್ದಾಗ, ಒಬ್ಬ ಸುಂ ದರ ಯುವಕನನ್ನು ಮೋಹಿಸುತ್ತಿದ್ದಳು; ಅವನನ್ನು ಮದುವೆ ಯಾಗಲಿಕ್ಕಾಗಲಿಲ್ಲ. ಅಂದಿನಿಂದಾಚೆಗೆ ನಾಲ್ಕಾರು ಜನರ ಕಡೆ ದೃಷ್ಟಿ ಬಿದ್ದಿತ್ತು. ಈ ಸಿದ್ಧಾಂತದ ಕಡೆ ಗಮನಕೊಡ

ಬೇಕಾದರೆ, ಅವಳು ತನ್ನ ಸ್ನೇಹಿತನೊಬ್ಬನೊಡನೆ ಜಗಳವಾಡಿದ್ದಳು.

ಇಪ್ಪತ್ತು ನಾಲ್ಕು ವಯಸ್ಸಿನ ಒಬ್ಬ ವಿದ್ಯಾರ್ಥಿಯು, ತನ್ನ ವಿಷಯಾಸಕ್ತಿಯನ್ನು ಪ್ಲೇಟೋ (*Plato*) ಮತ್ತು ಕ್ಯಾಣ್ಟ್ (*Kant*) ಇವರ ಗ್ರಂಥಗಳನ್ನೋದುವುದರಲ್ಲಿ ಅಡಗಿಸಿದ್ದನು—ಇವರಿಗೆ ವಿಷಯಾಸಕ್ತಿಯು ವಿಚಾರದಲ್ಲಿ ಎಷ್ಟು ಮಮತೆ ಎಂಬುದು ತಿಳಿದೇಯಿದೆ.

"ಒಬ್ಬಾಕೆಯು, ಈ ವಿಷಯಾಸಕ್ತಿಯನ್ನು, ಮಕ್ಕಳನ್ನು ಸಾಕುವ ಕಡೆಗೆ ತಿರುಗಿಸಬೇಕೆಂದು ದಾದಿಯಾದಳು. ಆದರೆ ಅವಳ ನಾದಿನಿಯು ಮಾತ್ಸರ್ಯದಿಂದ, ಮಗುವನ್ನು ಅವಳ ವಶಕ್ಕೆ ಕೊಡದೆ, ಇನ್ನೊಬ್ಬಳ ಕೈಲಿಟ್ಟಳು. ಕೆಲವು ಕಾಲದ ನಂತರ, ದಾದಿಯ ಮಾತ್ಸರ್ಯದಿಂದ, ಆ ಮಗುವು ಉಳಿಯುವುದೇ ಕಷ್ಟವಾಯಿತು. ಈಕೆಯೋ ತನಗೆ ಬೇಕಾದ ಮಗು ಸಿಕ್ಕದಿದ್ದಾಗ್ಯೂ, ಬೇರೆ ಮಕ್ಕಳನ್ನಾದರೂ ಸಾಕೋಣವೆಂದು ಒಂದು ನರ್ಸರಿ (*Nursery*) ಯನ್ನಿಟ್ಟಳು—ಹೀಗೆ, **ಸಮಷ್ಟಿಗೆ** ಉಪಯೋಗವಾಗುವುದೂ ಉಂಟು. (*p. 313 The Psycho analytic Method by Pfiser*) "

ಇದರಿಂದ ಈ ವಿಷಯಾಸಕ್ತಿಯ ವಿಚಾರವನ್ನು ಮಕ್ಕಳಿಗೆ ತಿಳಿಸದೆ ಮುಚ್ಚಿಟ್ಟು, ಅವುಗಳಿಗೆ ಕೇಡನ್ನುಂಟುಮಾಡುವ ಬದಲು, ಅವರಿಗನುಕೂಲವಾಗುವಂತೆ ತಿರುಗಿಸಿಕೊಳ್ಳಲಾಗುವುದಿಲ್ಲವೆ? ಷಿರಾಜನ ವಿಷಯಾಶಕ್ತಿಯು ತಾಜಮಹಲಿನ ಅವತಾರ (*Sublimation*) ವೆತ್ತಿದಂತೆ, ಒಬ್ಬೊಬ್ಬರೂ ಅದನ್ನು ದೇಶೋಪಕಾರಕ್ಕಾಗಿ ಉಪಯೋಗಿಸಲು ಸಾಧ್ಯವಲ್ಲ - ?

ಮಕ್ಕಳಿಗೆ ಒಂದು ಸಂಕಲ್ಪ ಹುಟ್ಟುವಂತೆ ಮಾಡುವುದು ಉಪಾಧ್ಯಾಯನ ಮೊದಲನೆಯ ಕರ್ತವ್ಯ. ತಾನು ಮುಂದೇನಾಗಬೇಕೆಂಬುದು ತಿಳಿಯದೆ ಓದುವವರೇ ಬಹಳ. ಹೀಗಾ

ಗಬೇಕೆಂಬ ಸಂಕಲ್ಪ ನಾಟಿದಮೇಲೆ, ಅದಾಗುವವರೆಗೂ ವ್ಯಕ್ತಿಗೆ ನೆಮ್ಮದಿಯಿಲ್ಲ. ನೆಮ್ಮದಿಯಿಲ್ಲದಿದ್ದಾಗ ಶೃಂಗಾರ ಚೇಷ್ಟೆಗಳಿಗೆ ಮನವೆಲ್ಲಿಂದ ಬಂದೀತು ?

ವಿದ್ಯಾರ್ಥಿಗೆ ಸರಿಯಾದ ವಯಸ್ಸಿಗೆ, ವಿವಾಹವೆಂದರೇನು ಏತಕ್ಕಾಗಿ ವಿವಾಹಮಾಡಿಕೊಳ್ಳುವುದು. ಇವುಗಳನ್ನು ತಿಳಿಸಬೇಕು. ಇದರಿಂದ ತಿಳಿಯದೆ ಮಾಡುವ ಪಾಪಸಮೂಹಗಳೆಷ್ಟೋ ನಶಿಸಿ ಹೋಗುತ್ತವೆ. ಇವುಗಳ ಜೊತೆಯಲ್ಲಿ, ತನಗೆ ಬಿಡುವಾದಾಗ, ಯಾವುದಾದರೂ ಒಂದರಲ್ಲಿ ಆಸಕ್ತಿಯಿರುವಂತೆ, ಮಗುವಿಗೆ ರುಚಿಹುಟ್ಟಿಸಬೇಕು; ಯಾವುದಾದರೂ ಒಂದು 'ಹಾಬಿ' (*Hobby*) ಇರಬೇಕು. ಇಷ್ಟೆಲ್ಲಾ ಉಪಾಧ್ಯಾಯರಿಂದ ಮಾಡಲು ಸಾಧ್ಯ. ಆದುದರಿಂದ ಈ ವಿಷಯಾಸಕ್ತಿಯ ಬೆಳವಣಿಗೆ, ಮಾರ್ಪಾಟು, ಇವುಗಳಲ್ಲಿ ತಂದೆ ತಾಯಿಗಳು ಎಷ್ಟು ಆಸಕ್ತಿಯನ್ನು ತೋರಿಸಬೇಕೋ, ಅಷ್ಟು, ವ್ಯಕ್ತಿಯನ್ನು ವಿದ್ಯಾವಂತನನ್ನಾಗಿ ಮಾಡುವ ಪಾಠ ಹೇಳುವ ಗುರುಗಳೂ ಕೂಡ, ತೋರಿಸಬೇಕಲ್ಲವೆ ?



# ಬುದ್ಧಿ ಕುಶಲತೆಯ ವಿಚಾರ

"ನಿಮ್ಮ ಹುಡುಗನ್ನ ಪಾಠಶಾಲೆಗೆ ಕಳಿಸುತ್ತೀರೇಕೆ?"

"ಪರೀಕ್ಷೆ ಮಾಡೋದಕ್ಕೆ."

"ಆಮೇಲೆ?"

"ಕಾಲೇಜಿಗೆ—"

"ಅಲ್ಲಿ ಮಾಡೋದೇನು?"

"ಇನ್ನೊಂದು ಪರೀಕ್ಷೆ ಮಾಡೋದಕ್ಕೆ."

"ಅಲ್ಲಿಂದಾಚೆ—"

"ಆಗಲಪ್ಪ! ನೋಡೋಣ. ಎಂ. ಎ., ಬಂದಾಗಲಿ."

"ಆಮೇಲೆ?"

"ಜಪಾನಿಗೋ ಅಮೇರಿಕಾಗೋ ಕಳಿಸೋಣ."

"ಏತಕ್ಕೆ?"

"ಇನ್ನೊಂದು ಪರೀಕ್ಷೆ ಮಾಡೋದಕ್ಕೆ!"

ಹೀಗೇ ಎಳೇ ಮಕ್ಕಳಿಂದ ಹಣ್ಣು ಹಣ್ಣು ಮುದುಕರ ವರೆಗೂ ಈ ಪರೀಕ್ಷೆಯಲ್ಲಿಯೇ ಲೀನ. ಪರೀಕ್ಷೆ ಹೋದ ದಂತೂ ಬದುಕಿದ್ದರೂ ಸತ್ತಹಾಗೇ!

"ನಿಮ್ಮ ಮಗೂಗೆ ಈ ಸಲ ಹೋಯಿತಂತೆ. ಅಯ್ಯೋ ಪಾಪ! ಸಧ್ಯ ನಮ್ಮೋನಿಗೆ ಆಯಿತಪ್ಪ." ಪರೀಕ್ಷೆ ಹೋಗಿ ಬಿಟ್ಟರೆ, ಕೂತೋನಿಗೊಬ್ಬನಿಗೇ ಅಲ್ಲ ಅವರ ಸಂಬಂಧ ಪಟ್ಟವರಿಗೆಲ್ಲಾ ಏನೋ ಜಗತ್ಪ್ರಳಯ ಆದಹಾಗೇ. ಆಗಿ ಬಿಟ್ಟರೆ, ಭಂಗಾರದ ಕಿರೀಟ ತಂದಿಟ್ಟದ್ದಕ್ಕಿಂತ ಹೆಚ್ಚೇ!

ಇದಕ್ಕೆಲ್ಲಾ ಮುಖ್ಯ ಕಾರಣ *ಈ ಪರೀಕ್ಷೆಗಳಿಗೂ ಬುದ್ಧಿ ಕುಶಲತೆಗೂ ಇರುವ ಸಂಬಂಧವೇ! ಪರೀಕ್ಷೆಯಲ್ಲಿ ತೇರ್ಗಡೆಯಾದವನಿಗೆ ಮಿಕ್ಕವರಿಗಿಂತ ಬುದ್ಧಿ ಕುಶಲತೆ ಹೆಚ್ಚೆಂಬ ಅಭಿಪ್ರಾಯ ಸಾಮಾನ್ಯವಾಗಿದೆ ಎಂಬುದನ್ನು ಹೇಳಲುಗತ್ಯವಿಲ್ಲ.

ಯಾವುದನ್ನು ಪರೀಕ್ಷಿಸುತ್ತಾರೆಂದು ಸ್ವಲ್ಪ ಯೋಚಿಸೋಣ. ಆಯಾ ಪಾಠಗಳಲ್ಲಿರುವ ಕಗ್ಗ (*Matter*) ಎಷ್ಟರಮಟ್ಟಿಗೆ ಉರು ಹೊಡೆದಿದ್ದಾನೋ ನೋಡೋಣವೆಂಬ ಕುತೂಹಲದಿಂದಲೋ ಅಥವಾ ವಿದ್ಯಾರ್ಥಿಯ ಬುದ್ಧಿ ಕುಶಲತೆ (*Intelligence*) ಎಷ್ಟರ ಮಟ್ಟಿಗೆ ಕುದುರಿದೆ ಎಂದು ತಿಳಿಯುವುದಕ್ಕಾಗಿಯೋ ಈ ಪರೀಕ್ಷೆ ಮಾಡುವುದು? ಪ್ರಶ್ನಾವಳಿಯೊಂದನ್ನು ತೆಗೆದುಕೊಂಡು, ಪ್ರತಿ ಪ್ರಶ್ನೆಗೂ ಇದಕ್ಕೇನು ಕಗ್ಗವು ಬೇಕೋ ಅಥವಾ ಕುಶಲತೆಯು ಬೇಕೋ ಎಂದು ನೋಡಿದಲ್ಲಿ ಹವಿನ್ನೈದಾಣೆ ಪಾಲು ಕಗ್ಗವೇ! ಕಗ್ಗವನ್ನು ಬಿಟ್ಟು ಬುದ್ಧಿ ಕುಶಲತೆಯನ್ನೇ ಪರೀಕ್ಷಿಸಲು ಸಾಧ್ಯವೆ? ಕಗ್ಗವಿಲ್ಲದೆ ಬುದ್ಧಿಕುಶಲತೆಯನ್ನು ತೋರುವ ರೀತಿ ಹೇಗೆ? ಪಾತ್ರೆಯಿಲ್ಲದೆ ನೀರನ್ನಾಗಲಿ ಹಾಲನ್ನಾಗಲಿ ಅಳೆಯಲು ಅಸಾಧ್ಯವಾಗಿರುವಂತೆ, ಕಗ್ಗವು ಕುಶಲತೆಗೆ ಸಹಕಾರಿ ಎಂಬುದನ್ನೇ ನೆನಪಿನಲ್ಲಿಟ್ಟು ಬುದ್ಧಿಕುಶಲತೆಯಿಂದ ಉತ್ತರ ಕೊಡಬೇಕಾದ ಪ್ರಶ್ನೆಗಳನ್ನು ಹಾಕಬೇಕೆಂಬುದೇ ಈಗಿನ ಮಾನಸ ಶಾಸ್ತ್ರಜ್ಞರ ಮತ.

ಮಕ್ಕಳನ್ನೇತಕ್ಕಾಗಿ ಪಾಠಶಾಲೆಗೆ ಕಳುಹಿಸಬೇಕೆಂಬುದನ್ನು ಯೋಚಿಸುವವರು ಅತಿ ವಿರಳ. ಮನೆಯಲ್ಲಿ ಮಗುವನ್ನು ನೋಡಿಕೊಳ್ಳುವುದು ಕಷ್ಟ. ತುಂಟತನ ವಿಪರೀತ, ಪಾಠಶಾಲೆಗಾದರೂ ಕಳುಹಿಸಿದರೆ ಅಲ್ಲಿ ಉಪಾಧ್ಯಾಯರು ನೋಡಿಕೊಳ್ಳುತ್ತಾರೆ. ಹೀಗೆ, ವಿದ್ಯಾಭ್ಯಾಸದ

---

* ಪರೀಕ್ಷೆ,—'ಜಯಕರ್ಣಾಟಕ' ಸಂಚಿಕೆ ೯ ಸಂಪುಟ ೭.

ತೆರಿಗೆ ಕೊಡುತ್ತಿದ್ದಾರಾಗಿ; ಹುಡುಗನನ್ನು ಪಾಠಶಾಲೆಗೆ ಕಳುಹಿಸಬೇಕಾಗಿದೆ ಎಂಬ ಅಭಿಪ್ರಾಯವಿದ್ದ ಹಾಗೆ ತೋರುತ್ತೆ. 'ನನ್ನ ತಲೆಯಮೇಲಿನ ಶನಿ ನಿನ್ನ ತಲೆಮೇಲೆ' ಎಂದ ಹಾಗೆ. ಹುಡುಗನ ಬುದ್ಧಿಕುಶಲತೆ ಯಾವ ಮಾರ್ಗದಲ್ಲಿದೆ? ಯಾವ ಕಸುಬನ್ನು ಹಿಡಿದರೆ ಅವನಿಗ ನುಕೂಲ? ಯಾವುದರಲ್ಲಿ ಕೀರ್ತಿ ಹೊಂದುತ್ತಾನೆ? ಯಾವ ರೀತಿಯಲ್ಲಿ ತನಗೂ ತನ್ನ ದೇಶಕ್ಕೂ ಉಪಯೋಗವಾದ ವ್ಯಕ್ತಿಯಾಗುತ್ತಾನೆ? ಇವುಗಳನ್ನೆಲ್ಲಾ ಯೋಚಿಸುವವರೆಷ್ಟುಮಂದಿ? ಅಪ್ಪ ನೆಪ್ಪ ತಿಳಿದವರ—'ನಾನು ಬಿ.ಎ., ನನ್ನ ಮಗ ಎಂ. ಎ., ಆಗಬೇಕು—ಅಷ್ಟೇ' ಮೊದಲು ಎಸ್. ಎಸ್. ಎಲ್. ಸಿ., ಪರೀಕ್ಷೆಗೆ ಚುನಾಯಿಸುವಾಗ ಲಂತೂ, ತಂದೆ ತಾಯಿಗಳ ಕಾಟನೇ ಕಾಟ. ಮೈಸೂರಿನಲ್ಲಿ ಇದು ತಪ್ಪಿದ್ದಾಗ್ಯೂ, ಇನ್ನೂ ಮದರಾಸು ಪ್ರಾಂತ್ಯದಲ್ಲಿ ಮೊದಲಿನಂತೆಯೇ ಇದೆ. ಓದೋ ಹುಡುಗನಿಗೆ ಆ ಪಾಠದಲ್ಲಿ ರುಚಿಯಿರಲಿ, ಬಿಡಲಿ, ಅವನದನ್ನು ಓದಲೇ ಬೇಕು. 'ಎದುರ ಮನೆ ಸುಬ್ಬರಾಯರ ಮಗ ಲೆಕ್ಕ ತೆಗೆದುಕೊಂಡಿದ್ದಾನೆ. ನಮ್ಮ ಸುಬ್ಬನೂ ಅದನ್ನೇ ತಗೋಬೇಕು. ಬರೋಲ್ಲ ಅಂದರೇನೋ, ಹುಚ್ಚು ಮುಂಡೆ, ಆ ಹಾಳು ಚರಿತ್ರೆತೊಗೊಂಡು ಮಾಡೋದೇನೊ? ಹುಟ್ಟಲಿಲ್ಲ ಬೆಳೀಲಿಲ್ಲ. ಆಗಲೆ ಇವನಿಗೆ ರುಚಿ ಬೇರೆ. ನಮ್ಮ ಕಾಲದಲ್ಲಿದ್ದ ಹಾಗೆ ಈಗಲೂ ಇದ್ದಿದ್ದರೆ ನೀವೇನು ಬದುಕುತ್ತಿದ್ದರೋ, ನಾ ಬೇರೆ ಕಾಣೆ! ಒಂದು ವ್ಯಾಕರಣ ಇತ್ತು! ಅದಕ್ಕೊಂದು ಕಷ್ಟಪಡುತ್ತಿದ್ದೆವು!! ಅದರಿಂದಲೇ ನಮ್ಮ ಕಾಲದಲ್ಲಿ ಓದಿದೋರಿಗೂ ಈಗನೋರಿಗೂ ಎಷ್ಟು ತಾರತಮ್ಯ!' ಪಾಠಗಳು ಎಷ್ಟು ಕಷ್ಟವಾಗಿದ್ದರೆ ಅಷ್ಟು ಬುದ್ಧಿ ಕುದುರವುದೆಂತಲೂ, ಕಷ್ಟವಾಗಿರುವುವುಗಳನ್ನು ಹಾಗೂ ಹೀಗೂ ಸ್ವಲ್ಪ ಮಟ್ಟಿಗೆ ನುಂಗಿದರೆ, ಅವ

ಕ್ಕಿಂತ ಸುಲಭವಾಗಿರುವುವುಗಳಲ್ಲಿ ಪಂಡಿತನಾಗಿರುವನೆಂದು ಹೇಳುವ ಹಾಗೂ ಕಂಡು ಬರುತ್ತದೆ. ಇಂಥವರ ಅಭಿಪ್ರಾಯದಲ್ಲಿ ಸಂಸ್ಕೃತ ಅಲ್ಪ ಸ್ವಲ್ಪ ಓದಿದರೆ ಸಾಕು, ಕನ್ನಡದಲ್ಲಿ ಪ್ರವೀಣರಾಗುವುದಕ್ಕೆ !

ಈ ಪರೀಕ್ಷೆಗಳಲ್ಲಿ ತೇರ್ಗಡೆಯಾಗುವುದು ನಮಗೆ ತಿಳಿದೇಯಿದೆ–'ನಂಬರಿ'ನ ಮೂಲಕ. ಈ 'ನಂಬರ'ನ್ನು ಕೊಡುವ ರೀತಿಯೇ ಬಹಳ ಸ್ವಾರಸ್ಯ. ಒಬ್ಬೊಬ್ಬರ ಬಗೆ ಒಂದೊಂದು ವಿಧ. ಕೆಲವರಿಗೆ ಉತ್ತರಗಳು ಸಣ್ಣದಾಗಿಯೂ ಸ್ವಾರಸ್ಯವಾಗಿಯೂ ಇರಬೇಕು; ಮತ್ತೆ ಕೆಲವರಿಗೆ ಎಷ್ಟು ಉದ್ದವಿದ್ದರೆ ಅಷ್ಟು ಆನಂದ; ಕ್ಲಿಷ್ಟವಾದಷ್ಟು ಕ್ಲಿಷ್ಟ ಪದಗಳಿರಬೇಕು; 'ಮನೆ' 'ಗೃಹ' ವಾಗಿರಬೇಕು. ಒಬ್ಬರಿಗೆ ಅಕ್ಷರಗಳು ಮುತ್ತು ಪೋಣಿಸಿದಂತಿರಬೇಕು. ಮತ್ತೊಬ್ಬರಿಗೆ ಅಲ್ಲಲ್ಲಿ ಕೆಂಪು ಮಸಿ ಗೆರೆಗಳಿದ್ದರೆ ಚಂದ. ಒಬ್ಬ ಪರೀಕ್ಷಕನು ಎರಡನ್ನು ಕೊಡುವೆಡೆ ಮತ್ತೊಬ್ಬಾತನು ನಾಲ್ಕನ್ನಿಡಬಹುದು; ಬೇರೊಬ್ಬಾತನು ಹನ್ನೆರಡು ಕೊಡುವುದೂ ಉಂಟು. ಈ ರೀತಿ 'ಕೈತೂಕ ಬಾಯಿ ಬಣ್ಣ' ಎಂಬಂತಾಗುವುದೇ !

ಇಷ್ಟಾಗಿ ಪರೀಕ್ಷಕನು ತನಗೆ ತಿಳಿದ ಹುಡುಗನ ಉತ್ತರಗಳನ್ನು ನೋಡುವುದಕ್ಕೂ ತಿಳಿಯದವನ ಉತ್ತರಗಳನ್ನು ನೋಡುವುದಕ್ಕೂ ಬಹಳ ತಾರತಮ್ಯ. ಮೊದಲೇ ಬುದ್ಧಿವಂತನೆಂದು ತಿಳಿದ ಹುಡುಗನ ಉತ್ತರಗಳಿಗೆ ಬೀಳುವಷ್ಟು 'ನಂಬರು' ಮಿಕ್ಕ ಉತ್ತರಗಳಿಗೆ ಬೀಳುವುದಿಲ್ಲ. ದಡ್ಡನೆಂದು ಸಿದ್ಧಾಂತ ಮಾಡಿಕೊಂಡಿರುವ ಹುಡುಗನ ಉತ್ತರಗಳು ಚೆನ್ನಾಗಿದ್ದರೂ, ಅವಕ್ಕೆ ಸೊನ್ನೆಯೇ ಪ್ರಾಪ್ತಿ. ಹೀಗೆ ಹೆಸರುಗಳನ್ನು ನೋಡಿ ಪರೀಕ್ಷಕರು ಹಾಕುವುದೇ ಸ್ವಲ್ಪ ಮಟ್ಟಿಗೆ ಸಹಜವೆಂದು ತೋರಿಸಲೋಸುಗ

ಕೇಂಬ್ರಿಡ್ಜ್ *(*Cambridge*) ನಲ್ಲಿ, ಒಂದು ಕೆಲಸ ಮಾಡಿದರು. A, B ಎಂಬಿಬ್ಬರು ಹುಡುಗರು ತಾವು ಬರೆದ ಪ್ರಬಂಧಗಳನ್ನು ಬದಲಾಯಿಸಿಕೊಂಡು B ಬರೆದಿದ್ದನ್ನು A ದೆಂತಲೂ, A ಬರೆದಿದ್ದನ್ನು B ದೆಂತಲೂ, ಉಪಾಧ್ಯಾಯರ ಮುಂದಿಟ್ಟರು. ಯಾವಾಗಲೂ B ಗೆ A ಗಿಂತಲೂ ಕಡಿಮೆ 'ನಂಬರು' ಬರುತ್ತಿತ್ತು; ಈ ಸಲವೂ ಉಪಾಧ್ಯಾಯರು ಹಾಗೇ ಕೊಟ್ಟರು.

ಇಷ್ಟೇ ಅಲ್ಲ. † ಇನ್ನೂ ಬೇರೆ ಬೇರೆ ವಿಧಗಳಲ್ಲಿಯೂ ಉತ್ತರಗಳ ಬೆಲೆಯು ಬದಲಾಯಿಸುವುದುಂಟು. ಇದಕ್ಕೆ ಮುಖ್ಯ ಕಾರಣವೇನೆಂದರೆ, ಪರೀಕ್ಷಕನು ಮನುಷ್ಯ, ಯಂತ್ರವಲ್ಲ. ಯಂತ್ರಕ್ಕಿರುವಷ್ಟು ನಿಶ್ಚಿತ ಎಲ್ಲಿಂದ ಬರಬೇಕು ?

ಕೆಲವು ತಪ್ಪುಗಳು ಬಾರದಿರಲೆಂದು, ಉತ್ತರಗಳನ್ನು ಬರೆದು ನಾಲ್ಕಾರು ಜನರ ಅಭಿಪ್ರಾಯವನ್ನು ಸಂಗ್ರಹಿಸಿ ಬೆಲೆ ಕಟ್ಟುವುದಕ್ಕೆ ಅಂದಾಜು ಮಾಡುವುದು ಬಹಳ ಕಡೆ ರೂಢಿಯಲ್ಲಿದೆ. ಎಷ್ಟಾದರೂ ಲೋಪಗಳಿಲ್ಲದೆ ಪರೀಕ್ಷಿಸುವುದು ಬಹಳ ಕಷ್ಟವೇ ಸರಿ.

ಈ ಪರೀಕ್ಷೆಗಳು ಎಲ್ಲಿದ್ದವು ? ‡ ಎಲ್ಲಿಂದಿಲ್ಲಿಗೆ ಬಂದವು ? ಇವು ಚೀನಾದೇಶದಿಂದಲೇ ಬಂದ ಹಾಗೆ ಕಾಣುತ್ತೆ. ಚೀನಾದಲ್ಲಿ ಎದ್ದರೆ ಪರೀಕ್ಷೆ, ಕೂತರೆ ಪರೀಕ್ಷೆಯಂತೆ. ಯಾವ ಕೆಲಸಕ್ಕೆ ಹೋಗಬೇಕಾದರೂ ಒಂದು ಪರೀಕ್ಷೆಯಾಗಿರಬೇಕಂತೆ. ತಾತ, ಮಗ, ಮೊಮ್ಮಗ ಮೂವರೂ, ಒಂದೇ ಪರೀಕ್ಷೆಗೆ ಕೂತ ಸಂದರ್ಭಗಳೆಷ್ಟೋ ಇವೆಯಂತೆ ! ಆದರೆ ಒಂದು ವಿಶೇಷ, ಈ ಪರೀಕ್ಷೆಗಳಲ್ಲಿ ತೇ

---

* *Educational Psychology-Thorndike*

† ಪರೀಕ್ಷೆ-'ಪ್ರೇಮ'-ಜೂಲೈ ಸಂಚಿಕೆ.

‡ ಪರೀಕ್ಷೆ —'ಜಯಕರ್ಣಾಟಕ' ಸಂಚಿಕೆ ೯ ಸಂಪುಟ ೭

ಗಡೆಯಾಗದಿದ್ದರೆ, ಯಾವ ಕೆಲಸವೂ ಅವರಿಗೆ ಕೊಡು ತ್ತಿರಲಿಲ್ಲವಂತೆ, ಆದಕ್ಕಾಗಿ ಅವರು ಉಪಾಧ್ಯಾಯರಾಗು ತ್ತಿದ್ದರಂತೆ!

ಪೂರ್ವಕಾಲದಲ್ಲಿ ಈ ರೀತಿಯಾದ ಪರೀಕ್ಷೆಗಳೇ ಇದ್ದವೆ? ಆಗ ಜನರ ಯೋಗ್ಯತೆಯನ್ನು ಪರೀಕ್ಷಿಸುತ್ತಿರಲಿಲ್ಲವೆ! ಪೂರ್ವಕಾಲಕ್ಕೂ ಈಗ್ಗೂ ಬಹಳ ತಾರತಮ್ಯವಿದ್ದಾಗ್ಯೂ, ಆಗ ಮಾಡುತ್ತಿದ್ದ ಪರೀಕ್ಷೆಗಳ ವಿಚಾರ ತಿಳಿದಲ್ಲಿ, ಇವು ಗಳಿಗೂ ನಿಜವಾಗಿ ಬುದ್ಧಿಕುಶಲತೆಯನ್ನಳೆಯುವ ವಿಧಾನ ಗಳಿಗೂ ತಾರತಮ್ಯವು ಸ್ವಲ್ಪವುಟ್ಟಿಗಾದರೂ ಗೋಚರ ವಾಗದಿರದು. 'ವರಪರೀಕ್ಷೆ' ಎನ್ನುವುದು ಬುದ್ಧಿ ಕುಶಲತೆ ಯನ್ನಳೆಯಲು ಒಂದು ವಿಧಾನ. ಒಬ್ಬ ಗೃಹಸ್ಥರು ವರಾನ್ವೇಷಣಾರ್ಥವಾಗಿ ಹೊರಟರು. ಒಂದು ಪಟ್ಟಣ ದಲ್ಲಿ ತಂಗಿ ವಿಚಾರಿಸಲು ಒಬ್ಬ 'ವರ' ಸಿಕ್ಕಿದಂತಾಯಿತು. ಮಾತನಾಡುತ್ತ ಆ ವರನನ್ನು 'ನೀವೇನು ಆಪಸ್ತಂಭರೋ ಆಶ್ವಲಾಯನರೋ?' ಎಂದು ಕೇಳಿದರು. ವರನು ಸ್ವಲ್ಪ ಹೊತ್ತು ಆಲೋಚಿಸಿ 'ನಾವೇನು ಅಷ್ಟು ಅಶ್ವಲಾಯನವೂ ಅಲ್ಲ; ಅಷ್ಟು ಆಪಸ್ತಂಭವೂ ಅಲ್ಲ' ಎಂದುತ್ತರವಿತ್ತನೆಂದು ವದಂತಿ. ಇಂತಹ ಸಣ್ಣ ಪ್ರಶ್ನೆಗಳು ಮೊದಲುಗೊಂಡು ಮಹಾಭಾರತದಲ್ಲಿನ 'ಯಕ್ಷ ಪ್ರಶ್ನೆ' ಯಂಥಾದ್ದರವರೆಗೂ ನಾನಾ ಬಗೆಯ ಪ್ರಶ್ನೆಗಳು ವಾಡಿಕೆಯಲ್ಲಿದ್ದುವು; ಈಗಲೂ ಸಹ ಮದುವೆ ಮನೆಗಳಲ್ಲಿ ನಾಲ್ಕಾರು ಜನ ಸೇರಿದ ಕಾಲ ದಲ್ಲಿ, ಈ ಪ್ರಶ್ನೆಗಳ ಮೂಲಕ ಹಾಸ್ಯ ಮಾಡುವುದುಂಟು. ಪಾಶ್ಚಿಮಾತ್ಯರಲ್ಲಿಯೂ ಸಹ ಇಂತಹವು ಕಂಡುಬರು ತ್ತದೆ. ಒಡಿಪಯಸ್ಸನಿಗೆ ಸ್ಫಿನ್ಕ್ಸ್ ಕೇಳಿದ್ದು; ಶ್ಯಾಮ್ಸನ್‌ಗೆ ಸಿಂಹ ಕೇಳಿದ್ದು; ಇವು ಈ ಗುಂಪಿಗೆ ಸೇರಿದವುಗಳೇ. ಈಗ ಮಹಾರಾಜಾ ಕಾಲೇಜಿನಲ್ಲಿ ಪ್ರೊಫೆಸರ್ ಆದ ಮ. ಎಂ. ವಿ. ಗೋಪಾಲಸ್ವಾಮಿಯವರು ಕನ್ನಡಿಯೇ ಮೂಲ

ವಾಗಿವುಳ್ಳ ಒಂದು ಉಪಕರಣವನ್ನೇರ್ಪಡಿಸಿ ಅದರ ಮೂಲಕ ಬುದ್ಧಿ ಕುಶಲತೆಯನ್ನು ಕಂಡು ಹಿಡಿಯುವ ಬಗೆಯನ್ನು ತೋರಿಸಿದ್ದಾರೆ. (*Mirror Drawing Apparatus.*) ಇದನ್ನು ನೋಡಿದೊಡನೆಯೇ ಮಹಾಭಾರತದಲ್ಲಿನ 'ಮತ್ಸ್ಯಯಂತ್ರ ಭೇದನೆ'ಯು ಜ್ಞಾಪಕಕ್ಕೆ ಬರುತ್ತದೆ.

ಮೊದಲು ಮೊದಲು ಮನುಷ್ಯನ ಹುಟ್ಟನ್ನು ನೋಡಿ ಅವನ ಬುದ್ಧಿ ಕುಶಲತೆಯನ್ನು ತಿಳಿಯುವುದೇ ಬಹಳ ವಾಡಿಕೆ; ಈಗಲೂ ಸಹ, ಹುಡುಗರ ಮುಖವನ್ನು ನೋಡಿದೊಡನೆಯೇ, ಅವರವರ ಬುದ್ಧಿ ಕುಶಲತೆಯು ನಮಗೆ ತಿಳಿದ ಹಾಗೆ ತೋರುತ್ತೆ.—ಬರೀ ಕೈಯಿಂದ ಇದು ಬಿಸಿ ನೀರು, ಇದು ತಣ್ಣೀರು ಎಂದ ಹಾಗೆ. ಹದಿನೆಂಟನೆಯ ಶತಮಾನದಲ್ಲಿ ಗಾಲ್ (*Gall*) ಎಂಬಾತನೂ, ಹತ್ತೊಂಬತ್ತನೆಯ ಶತಮಾನದ ಮೊದಲಲ್ಲಿ ಕೊಂಬ್ (*Combe*) ಎಂಬಾತನೂ ಕಪಾಲ ಶಾಸ್ತ್ರ (*Phrenology*) ದ ಮಹಿಮೆಯನ್ನು ತೋರಿಸಲು ಮೊದಲು ಮಾಡಿದರು. ಮಿದಳೇ ಬುದ್ಧಿ ಕುಶಲತೆಗೆ ಕಾರಣ. ಮಿದಳು ತಲೆಯಲ್ಲಿ ಅಡಕವಾಗಿದೆ; ತಲೆಯ ಮೂಲಕವೇ ಮಿದಳನ್ನು ತಿಳಿಯಬೇಕು. ಇದೇ ಇವರ ತರ್ಕ. ದೊಡ್ಡ ತಲೆಯಿರುವವನಿಗೆ ಬುದ್ಧಿ ಹೆಚ್ಚು. ಸೋರೆಕಾಯಂತೆ ತಲೆಯ ಆಕಾರವಿದ್ದರೆ, ಅವನು ದುಂದುಗಾರ. ತಲೆಯ ಒಂದು ಭಾಗವು ಉಬ್ಬಿದ್ದರೆ ಆ ಭಾಗದ ಮೂಲಕ ಅವನು ಚತುರ. ಈ ರೀತಿ ಇವರು ತೀರ್ಮಾನಿಸಿ, ಹುಡುಗರನ್ನು ಓದಿಸುವುದಕ್ಕೆ ಮುಂಚೆ ಅವರ ತಲೆಗಳನ್ನು ಪರೀಕ್ಷಿಸಬೇಕೆಂದು ಹೇಳತೊಡಗಿದರು.

ಇಷ್ಟರಲ್ಲಿ ಲಾವೇಟರ್ (*Lavater*) ಎಂಬಾತನು, ಚತುರತೆಯನ್ನು ತಿಳಿಯಬೇಕಾದರೆ ಮುಖದಿಂದಲೇ

ಎಂದು ಸಾರುತ್ತಾ, ಮುಖಲಕ್ಷಣ ನಿರೂಪಣೆ (*Physiognomy*) ಯ ತತ್ವಗಳನ್ನು ವಿಶದ ಪಡಿಸಲು ಮೊದಲು ಮಾಡಿದನು. 'ಮುಖ ನೋಡಿದರೆ ಅವನ ಮನಸ್ಸು ತಿಳಿಯದೆ! ಈ ಮೂರ್ತಿ ನೋಡಿದರೆ ಮಾಡಿದ ಹಾಗೇಯಿದೆ!' ಇದೇ ಅವನ ಮುಖ್ಯ ತತ್ವ. ಇಷ್ಟರಲ್ಲಿಯೇ ಮುಗಿಯಲಿಲ್ಲ; ಸಾಮುದ್ರಿಕ ಶಾಸ್ತ್ರವನ್ನೂ ಸಹ ಇದರ ಜೊತೆಗೆ ತಂದರು. ಈಗಲೂ ಕೂಡ, ಹಸ್ತಸಾಮುದ್ರಿಕ ಶಾಸ್ತ್ರದಲ್ಲಿ ನಂಬಿಕೆ ಎಲ್ಲೆಲ್ಲಿಯೂ ಇದೆ. ಯೂರೋಪಿನಲ್ಲಿ, ಕೀರೋ (*Cheero*) ಎಂಬಾತನು, ಈ ಶಾಸ್ತ್ರದ ಮೂಲಕ, ಎಷ್ಟರಮಟ್ಟಿಗೆ ಮನುಷ್ಯನ ಜೀವಮಾನವನ್ನು ತಿಳಿಯಬಹುದೆಂಬುದನ್ನು, ತಾನು ಕೆಲವರಿಗೆ ಹೇಳಿದವುಗಳೆಲ್ಲವನ್ನೂ 'ಟೈಮ್ಸ್ ಆಫ್ ಇಂಡಿಯಾ'ದಲ್ಲಿ ಈಗ್ಗೆ ಎರಡು ವರ್ಷಗಳ ಹಿಂದೆ, ಬರೆದಿದ್ದಾನೆ. ಇದರ ನಿಜಾಂಶವನ್ನು ತಿಳಿಯಲು ಸಾಕಾದಷ್ಟು ರುಜುವಾತಿಲ್ಲ.

ತಸ್ಕರ (*Criminal*) ಚಾಳಿಯುಳ್ಳವರ ಶರೀರ ಪ್ರಕೃತಿಯೇ ಒಂದು ವಿಧವೆಂತಲೂ, ಅವರಲ್ಲಿ ಕೆಲವು ಬಗೆಯ ಗುರ್ತುಗಳಿವೆಯೆಂತಲೂ, ಕೆಲವರು ಸಿದ್ಧಾಂತ ಮಾಡಿ, ಅಂತಹ ಗುರ್ತುಗಳನ್ನು ಹುಡುಕಲಾರಂಭಿಸಿದರು.—ಇದಕ್ಕೆ ಸ್ಟಿಗ್ಮೆಟಾ (*Stigmata*) ಎಂದು ಕರೆದರು. ಆದರೆ ಯಾವ ಬಗೆಯ, ವಿಜಾತೀಯವಾದ ಗುರ್ತೂ ಕಂಡುಹಿಡಿಯಲಾಗಲಿಲ್ಲ. ಇದಕ್ಕೆ ಕಾರಣ ತಿಳಿದೇಯಿದೆ. ಈ ತಸ್ಕರರ ಕೆಟ್ಟ ಚಾಳಿಯು, ಅವರ ಮನಸ್ಸಿನಲ್ಲಿಯೂ, ನಡತೆಯಲ್ಲಿಯೂ ಅಡಗಿದೆಯಾಗಿ, ಅವರ ಶರೀರದಲ್ಲಿಲ್ಲ. ಎಷ್ಟೋ ಸಲ ಅತ್ಯಂತ ಸ್ಫುರದ್ರೂಪಿಯು 'ತಸ್ಕರ' ನಾಗಿರುವದನ್ನು ನೋಡಿದ್ದೇವೆ. ವಿಕಾರಸ್ವರೂಪಿಯೂ, ಕುರೂಪಿಯೂ ಆದವನು ಕೆಟ್ಟ

ಕೆಲಸಗಳಲ್ಲಿಯೇ ನಿರತನಾಗಿರುವನೆಂದು ತೀರ್ಮಾನಿಸುವುದು ಯಾವ ನ್ಯಾಯ ?

ಬುದ್ಧಿ ಕುಶಲತೆಗೂ ಅಂಗಗಳಿಗೂ ಸಂಬಂಧವುಂಟೆಂದು ತೋರಿಸಲು ಪ್ರಯತ್ನಪಟ್ಟವರಲ್ಲಿ ಸರ್ ಫ್ರಾನ್ಸಿಸ್ ಗಾಲ್ಟನ್ನನೇ (*Sir Francis Galton*) ಗಣ್ಯನು. ಈತನು 'ಮಧ್ಯಮ'ದ ಉದ್ದವನ್ನೂ, ಬೆರಳುಗಳ ಮೇಲಿನ ರೇಖೆಗಳನ್ನೂ ಪರಿಶೋಧಿಸಲು ಮೊದಲು ಮಾಡಿದನು. ಇದರಿಂದ ಬುದ್ಧಿ ಕುಶಲತೆಯನ್ನಳೆಯಲು ಸಾಧ್ಯವಾಗದಿದ್ದರೂ, ಬೇರೆ ರೀತಿಯಲ್ಲಿ, ಈತನು ಪಟ್ಟ ಕಷ್ಟವು ಸಾರ್ಥಕವಾಯಿತೆಂದು ಹೇಳಬಹುದು ; ಈ ಬೆರಳುಗಳ ಗುರ್ತುಗಳ ಮೂಲಕವೇ ಕೈದಿಗಳನ್ನು ಗುರ್ತಿಸುವುದು. ಇದೇ ಕಾಲದಲ್ಲಿಯೇ ಕಾರಲ್ ಪಿಯರ್ಸನ್ನ (*Karl Pearson*) ನು, ಕಪಾಲದ ಸುತ್ತಳತೆ, ಅದರ ಗಾತ್ರ, ಮತ್ತು ಆಕಾರ, ಇವುಗಳಿಗೂ ಬುದ್ಧಿ ಕುಶಲತೆಗೂ ಇರುವ ಸಂಬಂಧವನ್ನು ಪ್ರಕಟಿಸಿದನು. ಇದಕ್ಕೆ ಬಯೋಮೆಟ್ರಿಕಲ್ ಮೆಷ್ಯುರ್‌ಮೆಂಟ್ಸ್ (*Biometrical measurements*) ಎಂದು ಹೆಸರು. ಇದರೊಡನೆ ಮಿಳಿತವಾಗಿರುವ ಗಣಿತವನ್ನು ತಿಳಿದುಕೊಳ್ಳಬೇಕಾದರೆ, 'ಗಣಿತ-ಹುಚ್ಚ'ರಿಂದಲೇ ಸಾಧ್ಯ. ಹೀಗೆಯೇ, ನಾನಾ ವಿಧವಾದ ಸಲಕರಣೆಗಳೂ, ಉಪಕರಣಗಳೂ ಬುದ್ಧಿ ಕುಶಲತೆಯನ್ನಳೆಯಲು ಸಿದ್ಧವಾದವು.* ಡೈನಾಮೋಮಿಟರ್ (*Dynamometre*) a ಎರ್ಗೋಗ್ರಾಫ್ (*Ergograph*) b ಟಾಪಿಂಗ್ ಟೆಸ್ಟ್ (*Tapping Test*)

---

**Introduction to Experimental Education. (Rusk)* a *212* b *213, 217*

ರಿಯಾಕ್ಷನ್ ಟೈಂ ಟೆಸ್ಟ್ c(*Reaction Timetest*) ಮುಂತಾದುವು ಕ್ರಮೇಣ ಉತ್ಪನ್ನವಾದವು.

'ಘನ ಒರಟು ; ಚರ್ಮ ದಪ್ಪ.' ಹೀಗೆನ್ನುವುದು ವಾಡಿಕೆಯಲ್ಲಿದೆ. ಪಾಶ್ಚಿಮಾತ್ಯರಲ್ಲಿಯೂ ಕೂಡ, ಚರ್ಮದ ಸೂಕ್ಷ್ಮಕ್ಕೂ, ಬುದ್ಧಿ ಕುಶಲತೆಗೂ ಸಂಬಂಧ ವಿರಬೇಕೆಂದು ನಂಬಿಕೆಯಿತ್ತು. ಇಪ್ಪತ್ತನೆಯ ಶತಮಾನದಲ್ಲಿ, ಈ ಸೂಕ್ಷ್ಮವನ್ನಳೆಯಲೋಸುಗ ಒಂದು ಉಪಕರಣವನ್ನು ನಿರ್ಮಾಣಮಾಡಿ, ಅದಕ್ಕೆ ಈಸ್ತಿಸಿಯೋಮಿಟರ್ (*Aesthesiometer*) ಎಂದು ನಾಮಕರಣ ಮಾಡಿದರು. ಇದು ನಿಜವಾದರೆ, ಚರ್ಮದ ಸುಳಿವು, ಸೂಕ್ಷ್ಮ ಬುದ್ಧಿ ಕುಶಲತೆಯನ್ನು ತೋರಿಸುವುದಾದರೆ, ಯೂರೋಪಿನ ಜನರಿಗಿಂತಲೂ, ಟಾರೆನ್ಸ್ ಸ್ಟ್ರೇಟ್ಸ್‌ನಲ್ಲಿರುವ ಕಾಡುಜನರು ಇಮ್ಮಡಿ ಬುದ್ಧಿ ಕುಶಲತೆಯುಳ್ಳವರಾಗಿರಬೇಕು. ಏಕೆಂದರೆ ಮ್ಯಾಕ್‌ಡೂಗಲ್ ಮತ್ತು ರಿವರ್ಸ್ ಇವರಿಬ್ಬರೂ, ಈ ಕಾಡುಜನರ ಚರ್ಮವು ಯೂರೋಪಿನ ನಾಗರೀಕರ ಚರ್ಮಕ್ಕಿಂತ ಇಮ್ಮಡಿ ಸೂಕ್ಷ್ಮವೆಂದು ತೋರಿಸಿದ್ದಾರೆ.

ಜ್ಞಾಪಕಶಕ್ತಿ ಹೆಚ್ಚಾಗಿ ಇದ್ದ ಹಾಗೆಲ್ಲಾ, ಅವನ ಬುದ್ಧಿ ಕುಶಲತೆಯೂ ಹೆಚ್ಚೆಂದೂ ಕೆಲವರು ಅಭಿಪ್ರಾಯ ಪಡುತ್ತಿದ್ದರು. ಈ ಜ್ಞಾಪಕಶಕ್ತಿಯೇನು ? ಇದೇನಾದರೂ ಒಂದು ವಿಧವಾದ ನೈಜ ಗುಣವೆ ? ಈ ರೀತಿ ಪ್ರಶ್ನೆಗಳು ಬಹು ಕಾಲದಿಂದಲೂ ಮಾನಸ ಶಾಸ್ತ್ರಜ್ಞರನ್ನು ತೊಂದರೆಗೊಳಿಸುತ್ತಿದ್ದರೂ, ಎಬ್ಬಿಂಗ್ ಹಾಸ್ (*Ebbinghaus*) ಗೆ ಮುಂಚೆ ಇದರ ನಿಜತ್ವವು ಅಷ್ಟು ಗೋಚರವಾಗಿದ್ದಿಲ್ಲ. ಜ್ಞಾಪಕಶಕ್ತಿಗೂ ಬುದ್ಧಿ ಕುಶಲತೆಗೂ ಸಂಬಂಧವನ್ನು ಕಂಡುಹಿಡಿಯಲು ಪ್ರಯತ್ನಪಟ್ಟು, ಕಬ್ಬಿಣ ಅಗಿಯೋಕೆ ಹೋಗಿ ಇದ್ದಲು ಸಿಕ್ಕ ಹಾಗೆ, ಈ

c *43, 101 144*

ಜ್ಞಾಪಕಶಕ್ತಿಯು ನಾನಾ ಅವತಾರಗಳು, ಅವುಗಳ ಗುಣ ಗಳು ಇವು ಕಂಡುಬಂದವು.

ಬುದ್ಧಿ ಕುಶಲತೆ (*Intelligence*) ಎಂದರೆ ಏನು ? 'ಅವನೇನಯ್ಯ ಚತುರ, ಯಾವ ಕೆಲಸವನ್ನು ಮಾಡಿದರೂ ಚನ್ನಾಗಿ ಮಾಡ್ತಾನೆ.' ಇದೇ ಕೆಲವರು ಬುದ್ಧಿ ಕುಶಲತೆ ಎನ್ನುವುದು. ಮತ್ತೆ ಕೆಲವರು ಮುಕ್ಕಾಲು ಪಾಲು ಜನರ ಕೈಲಿ ಮಾಡಲಾಗದ ಕೆಲಸ, ಬೇರೊಬ್ಬ ಮಾಡಿದರೆ ಅವನೇ ಬುದ್ಧಿಕುಶಲತೆಯುಳ್ಳವನೆಂದು ಅಭಿಪ್ರಾಯ ಕೊಡುವರು. ಸಾಮಾನ್ಯವಾಗಿ 'ಗಣಿತ' ದಲ್ಲಿ ಗಟ್ಟಿಗನಾದವ ನಿಗೆ ಬುದ್ಧಿ ಕುಶಲತೆ ಹೆಚ್ಚು ಎನ್ನುವರು. ಒಂದು ವಿಚಾ ರದಲ್ಲಿ ಪ್ರಯೋಜನವಿಲ್ಲದವನು, ಮತ್ತೊಂದು ವಿಚಾರ ದಲ್ಲಿ, ಗಟ್ಟಿಗನಾಗಿರಬಹುದು. 'ಗಣಿತ' ದಲ್ಲಿ ಗಟ್ಟಿಗನಾ ಗಿಲ್ಲದಿದ್ದವನು, ಒಳ್ಳೇ ವಕೀಲನಾಗಿರಬಹುದು. ಅವನಿಗೆ ಬುದ್ಧಿಕುಶಲತೆ ಇರುವುದೇ ಇಲ್ಲವೆ ? ಸಾಮಾನ್ಯವಾಗಿ ನಾವು ಇದನ್ನು (*Intelligence*) ಉಪಯೋಗಿಸುತ್ತಿ ದ್ದಾಗ್ಯೂ ಇದರ ಅರ್ಥವು ಚನ್ನಾಗಿ ತಿಳಿದಂತೆ ತೋರುವು ದಿಲ್ಲ; 'ಕೇಳಿದರೆ ನನಗೆ ತಿಳಿಯದು; ಕೇಳದಿದ್ದರೆ ನನಗೆ ಗೊ ತ್ತಿದೆ' ಎಂದ ಹಾಗೆ.

ಪ್ರತಿಯೊಂದು ವ್ಯಕ್ತಿಯಲ್ಲಿಯೂ ಈ ಬುದ್ಧಿ ಕುಶಲತೆ ಯು ಎರಡು ವಿಧವಾಗಿದ್ದಂತೆ ತೋರಿಬರುತ್ತದೆ. ಒಂದು ಹುಟ್ಟುತ್ತ ಬಂದಿದ್ದ ಹಾಗೆ ಕಾಣುತ್ತದೆ; ಮತ್ತೊಂದು ವಿಷಯಗಳನ್ನು ಕಲಿತ ಹಾಗೆಲ್ಲಾ ಹೆಚ್ಚುವ ಹಾಗೆ ಕಾಣು ತ್ತೆ. ಮೊದಲನೆಯದಕ್ಕೆ 'ಹುಟ್ಟು-ಬುದ್ಧಿ' (*General Mental Energy*), ಎರಡನೆಯದಕ್ಕೆ 'ಕಲಿತ-ಬುದ್ಧಿ' (*Specific Mental Capacity*) ಎಂದು ಕರೆಯ ಬಹುದು. ಹುಟ್ಟು-ಬುದ್ಧಿ, ಯಾವಾಗಲೂ ಒಂದೇ ಸಮ; 'ಕಲಿತ-ಬುದ್ಧಿ'ಯನ್ನು ಹೆಚ್ಚಿಸಿಕೊಳ್ಳಬಹುದು.

ಬುದ್ಧಿ ಕುಶಲತೆಯನ್ನಳೆಯುವುದೆಂದರೆ, ಈ ಹುಟ್ಟು-ಬುದ್ಧಿಯನ್ನಳೆಯುವುದೇ. ಇದನ್ನಳೆಯಬೇಕಾದರೆ, ಇದು ಮಾಡ ತಕ್ಕ ಕೆಲಸದಿಂದ ಅಳೆಯ ಬೇಕಾಗಿದೆ; ಒಂದಕ್ಕೂ ಮತ್ತೊಂದಕ್ಕೂ ಇರುವ ತಾರತಮ್ಯವನ್ನು ಕಂಡು ಹಿಡಿಯುವುದೇ ಇದರ ಕೆಲಸ. ಇದನ್ನಳೆಯಲು ಸಿರಿಲ್ ಬರ್ಟ್ (*Cyril Burt*) ಎಂಬಾತನು ಹನ್ನೆರಡು ಬಗೆಯ ಪರೀಕ್ಷೆ (*Tests*) ಗಳನ್ನೇರ್ಪಡಿಸಿರುವನು. ಇದನ್ನಳೆಯಲು ಒಂದು 'ಗಜದಕಡ್ಡಿ' ಬೇಕಿಲ್ಲ—ಇದಕ್ಕೆ ವಯಸ್ಸನ್ನು ಕಲ್ಪಿಸಿದ್ದಾನೆ. ಇದು ಬಿನ್ನೇ (*Binet*) ಎಂಬಾತನ ಸಲಹೆ. ಇದರ ಮುಖ್ಯ ತತ್ವವೇನೆಂದರೆ, ಹುಟ್ಟು-ಬುದ್ಧಿಯು ಹದಿನಾರು ವರ್ಷಗಳವರೆಗೂ ಬೆಳೆಯುತ್ತದೆ. ಆಮೇಲೆ ಹೆಚ್ಚುವುದಿಲ್ಲ, ಪ್ರತಿಯೊಬ್ಬ ವ್ಯಕ್ತಿಯ ಬುದ್ಧಿ ಕುಶಲತೆಯೂ ಇಷ್ಟರಲ್ಲಿರಬೇಕು ಆದರೆ ಮಹಾತ್ಮರು ಮಿಟ್ಟಿಗೆ ಇದನ್ನು ಮೀರಿರುತ್ತಾರಾಗಿ, ಅವರ ಬುದ್ಧಿ ಕುಶಲತೆಯನ್ನಳೆಯಲು. ಇದರಿಂದ ಸಾಧ್ಯವಲ್ಲ. ಗಾಡ್ವರ್ಟ್, ಯಾಕ್ಸ್, ಟರ್ಮನ್ ಮುಂತಾದವರೂ ಸಹ ಈ ರೀತಿ ಪ್ರಶ್ನಾವಳಿಗಳನ್ನು ತಯಾರಿಸಿದ್ದಾರೆ. ಇವುಗಳ ಮೂಲಕ ಒಬ್ಬ ವ್ಯಕ್ತಿಯನ್ನು ಪರೀಕ್ಷಿಸಬೇಕಾದರೆ, ಅರ್ಧ ಗಂಟೆಯಿಂದ ಒಂದು ಗಂಟೆವರಿಗೆ, ಹಿಡಿಯುತ್ತದೆ.

ಮೊನ್ನೆ ನಡೆದ ಘೋರಯುದ್ಧದಲ್ಲಿ, ಸಿಪಾಯಿಗಳನ್ನು ಪಂಗಡಗಳಾಗಿ ವಿಂಗಡಿಸಲು, ಈ ಪ್ರಶ್ನಾವಳಿಗಳನ್ನು ಉಪಯೋಗಿಸತೊಡಗಿದರು. ಒಬ್ಬೊಬ್ಬ ಸಿಪಾಯಿಗೂ ಅರ್ಧ ಗಂಟೆ ಹೊತ್ತಾದರೆ, ಪರೀಕ್ಷೆ ಮುಗಿಯುವುದರೊಳಗಾಗಿ ಯುದ್ಧವೇ ಕೊನೆಗಾಣುತ್ತಿತ್ತು. ಅದಕ್ಕಾಗಿ ಗುಂಪುಗುಂಪಾಗಿ, ಸಾವಿರಾರು ಜನರಿಗೆ ಏಕ ಕಾಲದಲ್ಲಿ ಕೊಡಲು ಸಾಧ್ಯವಾಗುವಂತೆ ಬೆಲಾರ್ಡ್ ಎಂಬಾತನು ಪ್ರಶ್ನಾವಳಿಗಳನ್ನು ಏರ್ಪಡಿಸಿದನು. (*1*) ಕೆಲಸಕ್ಕೆ ಬಾರದವರನ್ನು

ಅವರಿಗೆ ತಿಳಿಸುವುದು; (2) ಬುದ್ಧಿ ಕುಶಲತೆಯುಳ್ಳವರಿಗೆ ಸಲಹೆ ಕೊಡುವುದು-ಒಬ್ಬೊಬ್ಬರನ್ನೂ ಅವರವರಿಗೆ ಸರಿಯಾದ ಕೆಲಸ ಕೊಟ್ಟು, ಅವರಿಗೂ ದೇಶಕ್ಕೂ ಅನುಕೂಲವಾಗುವಂತೆ ಮಾಡುವುದು; ಇವೇ ಈ ಪ್ರಶ್ನಾವಳಿಗಳ ಮುಖ್ಯೋದ್ದೇಶಗಳು. ಪಾಠಶಾಲೆಗೆ ಹೋಗುವ ಮಕ್ಕಳಲ್ಲಿ, ಹಿಂದುಳಿದ ಹುಡುಗರನ್ನು ಆರಿಸಲು ಅನುಕೂಲವಾಗುವಂತೆ, ಸ್ಪಿಯರ್ಮನ್ (*Spearman*) ಎಂಬಾತನು, ಪ್ರಶ್ನಾವಳಿಗಳನ್ನು ಒಟ್ಟುಗೂಡಿಸಿರುವನು; ಇವುಗಳ ಉಪಯೋಗವನ್ನೂ ಉಪಯೋಗಿಸುವ ರೀತಿಯನ್ನೂ ಚೆನ್ನಾಗಿ ವಿವರಿಸಿರುವನು. ಈ ಪ್ರಶ್ನಾವಳಿಗಳನ್ನು ಒಟ್ಟುಗೂಡಿಸಿ, ಪಂಗಡಗಳಾಗಿ ವಿಂಗಡಿಸಿದ್ದಾರೆ.

1. ಚಿಕ್ಕ ಮಕ್ಕಳಿಗೆ-ಚಲನ (*Typical Performance tests*).

2. ಇಂಗ್ಲಿಷು ಬರದೆಯಿದ್ದವರಿಗೆ-ಚಿತ್ರಗಳ ಹುಳುಕನ್ನು ಹಿಡಿಯುವುದು (*pictorial Absurdities*)

3. ಪದ್ಮವ್ಯೂಹ (*Maze Threading*)

4. ಚುಕ್ಕೆಗಳಗಟ್ಟು (*Dot Pattern*)

5. ರೇಖಾವಿಭಜನ (*Dividing Geometric Figures*)

6. ಅಕ್ರಮವನ್ನು ಸರಿಪಡಿಸುವಿಕೆ (*Completion of Form series*)

7. ಅಂಕಗಳ ಶೋಧನೆ (*Checking identity of numbers*)

8. ಅಂಕಿ-ಸಂಕೇತ ಪ್ರತಿಚ್ಛಂಧ (*Digit-symbol substitution*)

9. ಕ್ರಮವನ್ನನುಸರಿಸಿ ಪೂರ್ತಿ ಮಾಡುವಿಕೆ *(Completion of Number relation series)*

10. ಕೂಡುವಿಕೆ.

**ಇಂಗ್ಲಿಷು ಬಂದವರಿಗೆ–ಒಬ್ಬೊಬ್ಬರಿಗಾಗಿ**

11. ಅಂಕಿಗಳ ಜ್ಞಾಪಕಶಕ್ತಿ *(Memory of Numbers)*

12. ಹಿಂದಿನಿಂದ ಅಂಕಿಗಳನ್ನು ಹೇಳುವಿಕೆ *(Repeating numbers backwards)*

13. ವಾಕ್ಯಗಳ ಜ್ಞಾಪಕಶಕ್ತಿ *(Memory for sentences)*

14. ಪದಸಮೂಹ *(Speaking Vocabulary)*

15. ಪದವ್ಯವಚ್ಛೇದ *(Word Discrimination)*

**ಇಂಗ್ಲಿಷು ಬಂದವರಿಗೆ–ಗುಂಪು ಗುಂಪಾಗಿ**

16. ವ್ಯತಿರಿಕ್ತ ಹೇಳುವಿಕೆ *(Naming Opposites.)*

17. ವರ್ಣಾಕ್ಷರನ್ಯಾಸ *(Spelling Tests)*

18. ವಿಚಾರಗಳ ತಿಳಿವಳಿಕೆ *(Range of Information)*

19. ಓದುವುದು–ಪದ *(Vocabulary)*

20. ಓದುವುದು–ಸರಾಗ *(Direction)*

21. ಓದುವುದು–ಅರ್ಥಸಹಿತ *(Interpretation)*

22. ವಾಕ್ಯಗಳನ್ನು ಸರಿಪಡಿಸುವಿಕೆ *(Disaranged sentences)*

*23.* ವಾಕ್ಯಗಳನ್ನು ಪೂರ್ತಿ ಮಾಡುವಿಕೆ (*Completion of sentences*)

*24.* ಸಾಮ್ಯ (*Analogies or Mixed Relations*)

*25.* ಬರಹ (*Hand writing tests*)

*26* ಪ್ರಬಂಧ (*English Composition*)

*27.* ಪದ್ಯವ್ಯವಚ್ಛೇದ (*Poetic Discrimination*

*28.* ಲೆಕ್ಕ (*Arithmetic-Reasoning*)

*29.* ನ್ಯಾಯ (*Practical gudgement*)

*30.* ತರ್ಕ (*Logical conclusions*)

ಇವು ಹೇಗಿರುತ್ತೆಂಬುದನ್ನು ತಿಳಿಸಲೋಸುಗ, ಇಲ್ಲಿ ಕೆಲವನ್ನು ಕೊಡಲಾಗಿದೆ. ಇವು ಇಂಗ್ಲಿಷಿನಲ್ಲಿರುವವನ್ನು ನೋಡಿ, ಅವುಗಳಂತೆ ಮಾಡಿದವುಗಳು; ಅವರವರು ಅವರವರಿಗೆ ತೋಚಿದಂತೆ, ಮುಖ್ಯ ತತ್ವಗಳನ್ನು ಬಿಡದೆ, ಬೇಕಾದ ಹಾಗೆ ತಯಾರ್ಮಾಡಿ ಕೊಳ್ಳಬಹುದು.

*1.* ಗುಂಪಿಗೆ ಸೇರದೇ ಇರುವವುಗಳನ್ನು ತೆಗೆದು ಹಾಕಿ:—

(ಅ) ಮನೆ, ಗುಡಿಸಲು. ಬಂಗಲೆ, ಕೋತಿ

(ಇ) ಗಿಳಿ, ಹಸು, ಗೂಬೆ, ಕಾಗೆ

(ಉ) ಕುದುರೆ, ನಾಯಿ, ಕೋಳಿ, ಜಿಂಕೆ

*2.* ಸರಿಯಾದ ಉತ್ತರವನ್ನು × ರಿಂದ ತೋರಿಸಿ.

ನಾವು ಸ್ನಾನ ಮಾಡುವುದು,

(ಕ) ನಲ್ಲಿಯಲ್ಲಿ ನೀರಿರುವುದಕ್ಕಾಗಿ,

(ಗ) ಎಲ್ಲರೂ ಮಾಡುತ್ತಾರೆ, ಅದಕ್ಕಾಗಿ,

(ಙ) ಕೊಳೆ ಹೋಗುವುದಕ್ಕಾಗಿ,

(ತ) ಊಟಮಾಡುವುದಕ್ಕಾಗಿ,

3. ಇದರಂತೆಯೇ ಇರುವ ಎರಡು ಅಂಕೆಗಳನ್ನು ಬರೆಯಿರಿ:—

(1) ೧, ೩, ೫, ೭, ೯, ೧೧,

(2) ೧, ೪, ೮, ೧೬, ೩೨, ೬೪,

4. ಇದನ್ನು ಅರ್ಥವಾಗುವಂತೆ ಸರಿಯಾಗಿ ಬರೆಯಿರಿ:—
ಮಾಡುವುದಕ್ಕೆ ಎಲೆ ಊಟ ಹಾಕಿದೆ.

5. ಇವಕ್ಕೆ ವ್ಯತಿರಿಕ್ತವಾಗಿರುವುವನ್ನು ಬರೆಯಿರಿ:—

(ಅ) ಕಪ್ಪು—
(ಈ) ಭಾರ—
(ಊ) ಧೈರ್ಯ—

6. ತೋರಿಸಿರುವ ಸ್ಥಳದಲ್ಲಿ ಸರಿಯಾದ ಪದವನ್ನು ಹಾಕಿ
ಅಂಚೆಯ ಚೀಟಿಯನ್ನು........ಮೇಲೆ ಹಾಕುತ್ತಾರೆ
ಮೇಜಿನ, ಬೊಂಬೆಯ, ಮರದ, ಕಾಗದದ,

7. ಸಂಬಂಧವನ್ನು ತೋರಿಸುವ ಪದವನ್ನು ಹಾಕಿ
ತಲೆ: ಬಾಯಿ :: ಚಿಕ್ಕಮನೆ:
ಕುರ್ಚಿ, ಸಂದೂಕ, ಬಾಗಿಲು, ಮೇಜು,

8. ರಾಮನು ಕೃಷ್ಣನಿಗಿಂತಲೂ ಉದ್ದ. ಕೃಷ್ಣನು
ಗೋಪಾಲನಿಗಿಂತಲೂ ಉದ್ದ. ರಾಮ ಗೋಪಾಲರ ಪೈಕಿ ಯಾರು ಉದ್ದ?

ಈ ಪರೀಕ್ಷೆಗಳಲ್ಲಿ ಒಂದು ಹೆಚ್ಚಿನ ವಿಷಯ. ಪ್ರಶ್ನೆಗಳಿಗೆ ಉತ್ತರಗಳನ್ನು ಬೇರೆ ಕಡೆ ಬರೆದಿರುತ್ತಾರಾಗಿ, ಯಾರು ಬೇಕಾದರೂ, ಇದಕ್ಕೆ ನಂಬರು ಹಾಕಿ ಅಳೆಯ ಬಹುದು. ಈಗಿರುವ ಪರೀಕ್ಷೆಗಳಂತಲ್ಲ.

ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ, ಈ ವಿಧವಾದ ಪರೀಕ್ಷೆಗಳನ್ನು ಪ್ರವೇಶಕ ಪರೀಕ್ಷೆಗಳಂತೆ ಉಪಯೋಗಿಸುತ್ತಲಿದ್ದಾರೆ. ಇದಕ್ಕೆ ಅವರ ಮುಖ್ಯ ತತ್ವವೇ ಕಾರಣ ; ಯಾರಿಗೆ ವಿಶ್ವವಿದ್ಯಾನಿಲಯದಲ್ಲಿ ಓದಲು ಸಾಕಾದಷ್ಟು ಬುದ್ಧಿ ಕುಶಲತೆಯಿದೆಯೋ, ಅಲ್ಲದೆ ಹಾಗೆ ಓದುವುದರಿಂದ ತಾವೂ, ತಮ್ಮ ದೇಶವೂ ಉತ್ತೇಜನ ಹೊಂದುತ್ತದೆಯೋ ಅಂತಹವರಿಗೆ ಮಟ್ಟಿಗೆ ವಿಶ್ವವಿದ್ಯಾನಿಲಯದಲ್ಲಿ ಸ್ಥಳ ಕೊಡಬೇಕಲ್ಲದೆ ಎಲ್ಲರಿಗೂ ಅಲ್ಲ. ನಮಗೂ ಅವರಿಗೂ ಇಷ್ಟೇ ತಾರತಮ್ಯ 'ಮುಕ್ಕೀಕಾ ಮುಕ್ಕಿ' ಗಟ್ಟಿಮಾಡಿ ಯಾರು ಒಪ್ಪಿಸುತ್ತಾರೋ, ಅವರೇ ವಿಶ್ವವಿದ್ಯಾನಿಲಯಕ್ಕೆ ಸೇರಲು ಅರ್ಹರೆಂದು ನಾವು ಒಪ್ಪಿಕೊಳ್ಳುತ್ತಲಿದ್ದೇವೆ. ಈ ಸಂದರ್ಭದಲ್ಲಿ ಆರ್ನಾಲ್ಡ್ ಬೆನ್ನೆಟ್ (*Arnold Bennett*) ರಂಗಸ್ಥಳದ ವಿಚಾರದಲ್ಲಿ ಹೇಳಿರುವ ಮಾತು ಜ್ಞಾಪಕಕ್ಕೆ ಬರುತ್ತದೆ. "ಕ್ಷಾಮವು ನೆಲೆಗೊಂಡಿದೆ ; ಮ್ಯಾನೇಜರುಗಳು ಹಸಿವಿನಿಂದ ಸಾಯುತ್ತಲಿದ್ದಾರೆ. ಹೊಸರೊಟ್ಟಿ ಮುಂದಿಟ್ಟರೆ ಭಯ. ಛೆ! ಹೊಸದನ್ನು ತಿನ್ನುವುದೇ ! ಹಳೇದಿದ್ದರೆ ಹೇಳಿ,' ಎನ್ನುತ ವೀರಸ್ವರ್ಗವನ್ನು ಹಾರೈಸುತ್ತಿದ್ದಾರೆ." *

* * * * * *

ನಾವು ಹೋಗುತಾ ಇದ್ದೇವೆ. ಎಲ್ಲಿಗೆ ? ಯಾರಿಗೆ

---

* A famine exists ; managers are dying of hunger. Offer them a new

ಗೊತ್ತು! ಓದು ಕಲಿಸುತ್ತಾ ಇದ್ದೇವೆ; ಕಲಿಸುತ್ತಾ ಇದ್ದೇವೆ. ಏತಕ್ಕಾಗಿ? ಈ ಕಾರಭಾರೆಲ್ಲಾ ಏನು? ಇದರಿಂದ ವ್ಯಕ್ತಿಗೆ ಯಾವ ವಿಧವಾದ ಉಪಕಾರ? ಈ ಪ್ರಶ್ನೆಗಳೇ, ಪ್ರತಿ ಒಬ್ಬ ವಿದ್ಯೆಯನ್ನು ಕಲಿಸಬೇಕೆಂದೆನ್ನುವ ಮಾನವನಿಗೂ, ಮುಂದೆ ಬಂದು ನಿಲ್ಲುವುವು. ತೋಚಿದ್ದೇನಾದರೂ ಹೇಳುವುದಕ್ಕೆ ಹೋದರೆ 'ಅಧಿಕ ಪ್ರಸಂಗಿ'; ಏನೂ ಹೇಳದೆ ಸುಮ್ಮನಿರಲು ಒಂದೊಂದುವೇಳೆ ಅಸಾಧ್ಯ. ಈ 'ಅಧಿಕ ಪ್ರಸಂಗಿ' ಜೇಡವೊಂದು ನನ್ನ ಸ್ನೇಹಿತ ಎಷ್ಟು ಒತ್ತಿ ಹೇಳಿದಾಗ್ಯೂ, ಅಗ್ಗಿ ಮುಟ್ಟಿಗೆ ಶಮನವಾಗುತ್ತದೆಯೋ ಹೊರತು, ಎರಡು ನಿಮಿಷಗಳಾದ ಮೇಲೆ, ಪುನಃ ಮೂಳೇ ರೋಗ (*Piles*) ಬಂದ ಹಾಗೆ ಬರೋದೇ, ನೋಡಿ ನೋಡಿ ಸಾಕಾಗಿ ಆತ – 'ಇದೊಂದು ತರದ ಹುಚ್ಚು' ಎಂದ.

ಒಬ್ಬರು: "ಏನಾದರೂ ಸಂಕಟ ಆದರೆ, ಬೇಕಾದೋರ ಹತ್ತಿರ ಹೇಳಿಕೊಂಡರೆ ಅರ್ಧ ಕಡಿಮೆಯಾಗುತ್ತೆ. ನೀನೇನು ಬೇಕೋ ಎಲ್ಲಾ ಒದರಿ ಬಿಡಯ್ಯ."

ಇನ್ನೊಬ್ಬರು: "ಒಳ್ಳೊಳ್ಳೇ ದೇವರೇ ಉರುಳಾಡಿ ಹೋದಾಗ, ಗುಡ್ಡದ ಮೇಲಿನ ದೇವರು ಕೈಲಾಸ ಬೇಡಿದನಂತೆ! ಒದರಲು ಸಿಕ್ಕಿದ ಹಾಗೆ ಬೈಗಳೇ ಪ್ರಾಪ್ತಿ."

---

loaf and they turn from it in fear. 'No', they say, 'you must not ask me to eat that; it is not stale', and go on bravely dying.

—Things that have interested me—
Arnold bennett.

ಮತ್ತೊಬ್ಬರು: "ಹೊಸದಾಗಿ ಟ್ರೈನಿಂಗ್ ಆಗಿದೆ. ಹೊಸ ಅಗಸ ಗೋಣೀನ ಎತ್ತಿತ್ತೊಗೆದ ಅಂತ. ಕೂಗಲಿ, ಬರೀ ಕಂಠ ಶೋಷಣೆ, ಮುಂದೆ ತಲೆ ತೂಗೋದು ಮತ್ತೆ ಹಿಂದೆ, ಇನ್ನೂ ಸ್ವಲ್ಪ ಎಕೀ ಸಂಬಂಧ ಅಂತಾರೆ."

ಬೇರೊಬ್ಬರು: "ಇವರಪ್ಪಂದಿರಿಗೆ, ಅವರಪ್ಪಂದಿರಿಗೆ ಬುದ್ಧಿ ಕಲಿಸಿದೋರು ನಾವು. ನಮ್ಮ ಕಣ್ಣ ಮುಂದಿನ ಪೋರ. ಅವ ಆಸ್ನೋದು ಅಷ್ಟ್ರಾಗೇ ಅದೆ. ಏನೋ ಆವಗೂ ಸ್ವಲ್ಪ ತೀರ್ಥ ತಗೊಂಡ ಹಾಗಾಗ್ಲಿ."

ಮಗದೊಬ್ಬರು: "ಊರು ಉಪಕಾರ ಅರೀದು; ಹೆಣ ಶೃಂಗಾರ ಅರೀದು ಇವನಿಗೇನು ಹಿಡಿದಿದೆ ಇದೆಲ್ಲಾ — ತನ್ನ ಪಾಡಿಗೆ ತಾನು ತನ್ನ ಕೆಲಸ ನೋಡದೆ ಇಲ್ಲದ ಕಾಷ್ಟ ವ್ಯಸನ!"

ಹೀಗೆ ಹೇಳಿ ಏನಾದರೂ ಎನ್ನ ಬಹುದು. ಅಲ್ಲದೆ ನಗಬಹುದು. 'ನಗೇನಾಭಿಕ್ಷ್ಯಾಮಿ,' ಎಂದಿದ್ದರೂ, ನಕ್ಕರೆ ನನ್ನ ಮನೋಗತವು ಸಫಲವಾದಂತೆಯೇ ಸರಿ.



## ನಮ್ಮಲ್ಲಿ ದೊರೆಯುವ ಇತರ ಪುಸ್ತಕಗಳು

| | |
|---|---|
| ಮಕ್ಕಳ ನಾಟಕಗಳು | 0—4—0 |
| ಬಾಬರ್ (ಜೀವನಚರಿತ್ರೆ) | 0—3—0 |
| ಬಂಧ ವಿಮೋಚನೆ (ನಾಟಕ) | 0—8—0 |
| ಸೂರ್ಯಭೇದನ ವ್ಯಾಯಾಮ | 0—8—0 |
| ಬೌದ್ಧ ದೇಶೀಯರ ನಡೆನುಡಿಗಳು | 0—7—0 |
| ಕಾಸಿನ ಸರ (ಸಣ್ಣ ಕತೆಗಳು) | 0—4—0 |
| ಬೆಂಜಮಿನ್ ಫ್ರಾಂಕ್ಲಿನ್ | 1—0—0 |

**ವಿನಾಯಕ ಪ್ರಕಟನಾಲಯ**
ಬಸವನಗುಡಿ, ಬೆಂಗಳೂರು.